# ಗುಲಬರ್ಗಾ ಜಿಲ್ಲೆಯ ರೈತ ಚಳವಳಿಗಳು : ಚಾರಿತ್ರಿಕ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯ, ಹಂಪಿ, ಚರಿತ್ರೆ ವಿಭಾಗಕ್ಕೆ ಎಂ.ಫಿಲ್. ಪದವಿಗಾಗಿ ಸಲ್ಲಿಸಿದ ನಿಬಂಧ)

ಸಂಶೋಧಕರು

ಹಣಮಂತ್ರಾಯ

ಮಾರ್ಗದರ್ಶಕರು

ಡಾ. ವಿರೂಪಾಕ್ಷಿ ಪೂಜಾರಹಳ್ಳಿ

ಸಹಪ್ರಾಧ್ಯಾಪಕರು

ಚರಿತ್ರೆ ವಿಭಾಗ



ಸಮಾಜವಿಜ್ಞಾನಗಳ ನಿಕಾಯ

ಚರಿತ್ರೆ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ - ೫೮೩ ೨೭೬

೨೦೦೯-೧೦

# ಗುಲಬರ್ಗಾ ಜಿಲ್ಲೆಯ ರೈತ ಚಳವಳಿಗಳು :

## ಚಾರಿತ್ರಿಕ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯ. ಹಂಪಿ, ಚರಿತ್ರೆ ವಿಭಾಗಕ್ಕೆ ಎಂ.ಫಿಲ್., ಪದವಿಗಾಗಿ ಸಲ್ಲಿಸಿದ ನಿಬಂಧ)

ಸಂಶೋಧಕರು

**ಹಣಮಂತ್ರಾಯ**

ಮಾರ್ಗದರ್ಶಕರು

**ಡಾ.ವಿರೂಪಾಕ್ಷಿ ಪೂಜಾರಹಳ್ಳಿ**

ಸಹಪ್ರಾಧ್ಯಾಪಕರು

ಚರಿತ್ರೆ ವಿಭಾಗ



ಸಮಾಜವಿಜ್ಞಾನಗಳ ನಿಕಾಯ

**ಚರಿತ್ರೆ ವಿಭಾಗ**

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ - ೫೮೩ ೨೭೬

೨೦೦೯-೧೦

862

## ದೃಢೀಕರಣ ಪತ್ರ

**ಗುಲಬರ್ಗಾ ಜಿಲ್ಲೆಯ ರೈತ ಚಳವಳಿಗಳು : ಚಾರಿತ್ರಿಕ ಅಧ್ಯಯನ** ಎಂಬ ನಿಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್. ಪದವಿಗಾಗಿ ಹಣಮಂತ್ರಾಯ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತಾರೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಬೇರೆ ಯಾವುದೇ ಉದ್ದೇಶಕ್ಕಾಗಿ ಅಥವಾ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ : 13-9-10
ಸ್ಥಳ : ವಿದ್ಯಾರಣ್ಯ

ಡಾ. ವಿರೂಪಾಕ್ಷಿ ಪೂಜಾರಹಳ್ಳಿ
ಮಾರ್ಗದರ್ಶಕರು ಮತ್ತು ಸಹ ಪ್ರಾಧ್ಯಾಪಕರು
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬

# ಪ್ರಮಾಣ ಪತ್ರ

ಗುಲಬರ್ಗಾ ಜಿಲ್ಲೆಯ ರೈತ ಚಳವಳಿಗಳು : ಚಾರಿತ್ರಿಕ ಅಧ್ಯಯನ ಎಂಬ ನಿಬಂಧವನ್ನು ಡಾ.ವಿರೂಪಾಕ್ಷಿ ಪೂಜಾರಹಳ್ಳಿ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಎಂ.ಫಿಲ್. ಪದವಿಗಾಗಿ ಸಮಾಜ ವಿಜ್ಞಾನಗಳ ನಿಕಾಯದ ಚರಿತ್ರೆ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಬೇರೆ ಯಾವುದೇ ಉದ್ದೇಶ ಅಥವಾ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣಿಕರಿಸುತ್ತೇನೆ.

ದಿನಾಂಕ : 13-9-2010
ಸ್ಥಳ : ವಿದ್ಯಾರಣ್ಯ

Hanmanthi

ಹಣಮಂತ್ರಾಯ
ಸಂಶೋಧಕರು
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬

## ಪರಿವಿಡಿ

## ಅಧ್ಯಾಯ - ಒಂದು



# ಅಧ್ಯಯನದ ಉದ್ದೇಶ, ವ್ಯಾಪ್ತಿ, ಸ್ವರೂಪ ಹಾಗೂ ವಿಧಾನ

## ಅಧ್ಯಾಯ - ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ, ಸ್ವರೂಪ ಹಾಗೂ ವಿಧಾನ

ಭಾರತ ಹಳ್ಳಿಗಳಿಂದ ಕೂಡಿದ ಕೃಷಿ ಪ್ರಧಾನ ರಾಷ್ಟ್ರ. ಆದ್ದರಿಂದ ದೇಶದ ಜನಸಂಖ್ಯೆಯಲ್ಲಿ ಬಹು ದೊಡ್ಡ ಪಾಲು ಬೇಸಾಯಗಾರರದು. ಹೀಗೆ ಕೃಷಿಯನ್ನು ತಮ್ಮ ಬದುಕಿನ ಜೀವಾಳವಾಗಿ ಕಂಡವರು ರೈತರು. ಭೂಮಿಯನ್ನು ಉಳುಮೆ ಮಾಡಿ ಬಿತ್ತಿ ಬೆಳೆ ತೆಗೆಯುವ ಕಾಯಕವೇ ಬೇಸಾಯ. ಇದು ಮನುಷ್ಯನ ಹೊಟ್ಟೆಗೆ ತುತ್ತು ಕೊಡುವ ಒಂದು ಮುಖ್ಯ ಮಾಧ್ಯಮ. ಕೃಷಿಯ ಪ್ರಾಚೀನತೆ ಸಹಸ್ರಮಾನಗಳಿಂದ ಬಂದಿದ್ದರೂ ಆದರ ವಿಕಸನ ಮಾತ್ರ ಆಧುನಿಕ ದಿನಗಳವರೆಗೂ ವಿಸ್ತರಿಸಿಕೊಂಡಿದೆ ಈ ನಿಟ್ಟಿನಲ್ಲಿ ರೈತರ ನೋವು ನಲಿವುಗಳಿಗೆ ಸಮಸ್ಯೆ-ಸವಾಲುಗಳು ಕಾಡುತ್ತಾ ಬಂದಿವೆ. ಮೊದಲಿಗೆ ರೈತ ತನ್ನ ನೋವು ಪ್ರಾರ್ಥಿಸಿ ಹೇಳಿಕೊಂಡ; ಮನವಿ ಮಾಡಿ ನುಡಿದ; ಆಗ್ರಹಿಸಿದ; ದೂರು ದುಮ್ಮಾನಗಳ ಮೂಲಕ ದನಿ ಆಡಿದ. ಶೋಷಣೆ ಹೆಚ್ಚಾದಾಗಲೂ, ಸಂಘಟನೆಯ ಬಲವಿಲ್ಲದಿದ್ದಾಗ ಅಸಹಾಯಕನಾಗಿ ಶೋಷಣೆ, ನೋವು, ಅವಮಾನ, ಅತ್ಯಾಚಾರ, ದೌರ್ಜನ್ಯ, ಸಿಟ್ಟು, ಹತಾಶೆ, ಹಿಂಸೆ, ದಬ್ಬಾಳಿಕೆ, ಎಲ್ಲವನ್ನು ತಡೆದುಕೊಳ್ಳುತ್ತ ಬಂದ. ಅದುಮಿಟ್ಟ ಅವೆಲ್ಲವೂ ಸಮಯ ಪಕ್ವವಾದಾಗ ಸಂಘಟನಾ ಪ್ರಜ್ಞೆ ಜಾಗೃತವಾದಾಗ ಹೋರಾಟ, ಪ್ರತಿಭಟನೆ, ಸತ್ಯಾಗ್ರಹದ ಮೂಲಕ ಸ್ಫೋಟಿಸಿದವು.

ಪ್ರಾದೇಶಿಕವಾಗಿ ಗುಲಬರ್ಗಾವು ಹಿಂದುಳಿದ ಪ್ರದೇಶವಾಗಿದೆ. ಇಲ್ಲಿನ ರೈತರು ಹಲವಾರು ಸಮಸ್ಯೆಗಳಿಗೆ ಸಿಲುಕಿದ್ದಾರೆ. ಸಮಸ್ಯೆಗೆ ಪರಿಹಾರ ಕಾಣಲು ಗುಲಬರ್ಗಾದಲ್ಲಿ ರೈತರ ಚಳವಳಿಗಳು ನಡೆದಿವೆ. ರಾಷ್ಟ್ರದ ಅಭಿವೃದ್ಧಿಯಲ್ಲಿ ಕೃಷಿ ಅಭಿವೃದ್ಧಿಗೆ ಅನಿಶ್ಚಿತ ಮಳೆಯಿಂದ ಅಸ್ಥಿರತೆ ಉಂಟಾಗಿದೆ. ಸಂಬಂಧ ಪಟ್ಟ ಆರ್ಥಿಕ ಮತ್ತು ಸಾಮಾಜಿಕ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳುವಲ್ಲಿ, ರೈತರ ಆರಂಭದ ದಿನಗಳಲ್ಲಿ ದೂರು ದುಮ್ಮಾನವಿದ್ದರೆ, ನಂತರ ಮೆರವಣಿಗೆ, ಧರಣಿ, ಸತ್ಯಾಗ್ರಹ, ಪ್ರದರ್ಶನ

ನಡೆಸಿದರು, ಬೇಡಿಕೆ ಈಡೇರದಿದ್ದಾಗ ಹಿಂಸೆ ತಾಳಲಾರದ ರೈತ ಉಗ್ರವಾಗಿ ಪ್ರತಿಭಟಿಸತೊಡಗಿದ. ತನ್ನ ಸಂಘಟನಾ ಬಲದ ಶಕ್ತಿ ಕಂಡುಕೊಂಡ ರೈತ ತನ್ನ ಬೇಡಿಕೆಗಳನ್ನು ಪಡೆಯುವಲ್ಲಿ ಚಳವಳಿಯಲ್ಲಿ ತೊಡಗಿದ.

ರೈತ ಚಳವಳಿಯನ್ನು ಕುರಿತು ರೈತ ಕ್ರಾಂತಿ ಗೀತೆಗಳ ಮೂಲಕ ಹೋರಾಟದ ಮನೋಭಾವ ಮತ್ತು ನೋವುಗಳನ್ನು ತೋರ್ಪಡಿಸಿದರು. ಇದಕ್ಕೆ ಒಕ್ಕಲತಿ; ಎಂಬ ಶೀರ್ಷಿಕೆಯಡಿ ಬರುವ ಹಾಡುಗಳನ್ನೇ ರೈತಕ್ರಾಂತಿ ಗೀತೆಗಳೆಂದು ಹೆಸರಿಸಲಾಗಿದೆ. ಅದರಲ್ಲಿರುವ ಹೊಸ ರಾಜ್ಯವ ಕಟ್ಟಲು ನೀವು ಸಿದ್ಧರಾಗಿ ಎಂಬ ಹಾಡಿನ ಮೊದಲ ಚರಣವೇ "ಎದ್ದೇಳಿ ರೈತರ ಜಾಗೃತರಾಗಿ ನಿಲ್ಲಿರಿ" ಎಂಬುದು ಹೋರಾಟದ ಚಳವಳಿಯ ಘೋಷಣೆಯಾಗಿದೆ. ಇಲ್ಲಿನ ಹೋರಾಟದ ಭಾಷೆ, ಇಲ್ಲಿನ ಕೆಚ್ಚು ಉತ್ತಮ ಮಣ್ಣಿನ ಬೆವರ ಕೆಚ್ಚು ಎಂದು ಇಲ್ಲಿ ತಿಳಿಯಬೇಕಾಗಿದೆ.

ಅನ್ನವನ್ನು ಬೆಳೆಯಲು ನಾವು ಹರಿಸಿದೆವು ನೆತ್ತರ | ಫಲವನುಂಡ
ಭಂಡರು ರೈತರ ಹೆಣ ಹೊತ್ತರು
ದೇಶದ ಎಂದು (ಬೆನ್ನೆಲಬುರೆಂದು) ಎಲುಬು ಮುರಿದು ಇಟ್ಟರು |
ಮಣ್ಣಿನ ಮಗ ಇವ ಎನ್ನುವ ಬಾಯ್ಗೆ ಮಣ್ಣು ಇಟ್ಟರು
ಡ್ಯೂಟಿಗಾರರೆಲ್ಲ ಸೇರಿ
ಲಾಟಿ ಏಟು ಕೊಟ್ಟರು | ಬೆವರಿನ ಬೆಲೆ ಕೊಡಿರೆಂದರೆ
ಗುಂಡಿನ ಗುರಿ ಇಟ್ಟರು
ಹೆಗಲ ಮೇಲೆ ರೆಂಟೆ ಹೊರಸಿ ಹೊಲಕೆ ಅಟ್ಟಿಬಿಟ್ಟರು | ದೇಶದಾಸ್ತಿ
ಲೂಟಿ ಹೊಡೆದು ಕೈಗೆ ಚಿಪ್ಪು ಕೊಟ್ಟರು
ಭೂಮಿತಾಯಿ ಬಸಿರ ಮಕ್ಕಳು ಉಸಿರು ಹಾಕಿ ಕುಂತವು | ತಡೆದು
ತಡೆದು ನಡೆದು ಕೊನೆಗೆ ಎದ್ದು ನಿಂತವು....
ಹೆಗಲ ಮೇಲೆ ಹಸಿರು ಶಾಲು ಬಲಗೈಯಲ್ಲಿ ಬಾರುಕೋಲು ಹಿಡಿದು
ಹೊರಟ ರೈತರೆಲ್ಲ ಹಾಕೋಣ ಧಾಪುಗಾಲ....
ಗಾಂಧಿ ತತ್ವವೆಲ್ಲ ರಾಜ್ಯದಲ್ಲಿ ಬೆಳಗಲು

ಇಲ್ಲಿ ದುಡಿದ ರೈತನನ್ನು ಬಾಯಿಪ್ರಚಾರದಲ್ಲಿ ಹೊಗಳಿ ಅವನ ದುಡಿಮೆಯ ಫಲವನ್ನು ಶೋಷಿಸಿದ ಚಿತ್ರವಿದೆ. ಉತ್ತಮನು ಬೆಳೆದ ಬೆಳೆಗೆ ಸೂಕ್ತ ಬೆಲೆಗೆ ಕೇಳಿದಾಗ ಸಿಕ್ಕಿದ್ದು ಲಾಟಿ ಏಟು. ಬಂದೂಕು ಗುಂಡು ಎಂದು ರೈತ ಚಳವಳಿಗಳಲ್ಲಿ ನಡೆದ ಲಾಠಿ ಛಾರ್ಜ್, ಗೋಲಿಬಾರ್ ಅನ್ನು ವ್ಯಂಗ್ಯವಾಗಿ ಹೇಳಿದೆ. ಆದರೂ ಗಾಂಧೀಜಿಯ ಅಹಿಂಸಾತ್ಮಕ ಹೋರಾಟದಲ್ಲಿ ಅವರಿಗೆ ಸಾಂಸ್ಕೃತಿಕ ನಂಬಿಕೆ ಇದೆ. ಅದಕ್ಕಾಗಿ ಸಾಕಷ್ಟು ಕಾದು, ನೋಡಿ, ತಡೆದ ಸಹನೆಯ ಕಟ್ಟೊಡೆದಾಗ ಹಸಿರು ಶಾಲು ಹೊದ್ದು ಬಾರುಕೋಲು ಹಿಡಿದು ಧಾಪುಗಾಲು ಹಾಕಿ ಪಾದಯಾತ್ರೆ ಹೋರಟ ರೈತರ ಚಿತ್ರವಿದೆ.

ಸಂಘಟನೆಯ ರೈತ ಸಮುದಾಯದ ಪ್ರದರ್ಶನವೇ ಸಂಬಂಧಿಸಿದವರಿಗೆ ಎಚ್ಚರಗೊಳ್ಳಲು ಅವಕಾಶ ನೀಡಿದ ಸಂಕೇತ. ರೈತರ ಶಕ್ತಿ ಸಹನೆಯ ಗೂಡಿನೊಳಗಿರುವ ಸಿಡಿಮದ್ದು ಎಂಬ ಭಾವನೆ ತುಂಬಿದ ಹಾಡು ಇದಾಗಿದೆ.

ರೈತ ಚಳವಳಿಗಳು ಪ್ರಾಚೀನ ಕಾಲದಿಂದಲೂ ನಡೆದಿರುವ ಬಗ್ಗೆ ಮಾಹಿತಿ ಇದೆ. ರೈತ ಚಳವಳಿ ಎಂಬುವುದು ನಿರಂತರ ನಡೆದು ಬಂದಿರುವಂತೆ ಕಂಡುಬರುತ್ತದೆ. ಹಾಗೆಯೇ ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಕೃಷಿಗಾಧಾರವಾದ ಗೋಸಂಪತ್ತು ಹಸು, ಎತ್ತು ಎಲ್ಲಾ ಸೇರಿ ಹಟ್ಟಿಯಲ್ಲಿ ಸುರಕ್ಷಿತವಾಗಿರುತ್ತಿದ್ದವು. ಇಂಥ ಹಟ್ಟಿಯಿಂದ "ಗೋಗ್ರಹಣ"ಗಳು ನಡೆಯುತ್ತಿದ್ದವು. ಬೇಸಾಯದ ದುಡಿಮೆಯ ಚೈತನ್ಯದ ಸಂಕೇತಗಳಾಗಿದ್ದ ಎತ್ತುಗಳ ಅಪಹರಣವು ಸೈಂಧವ ಸಂಸ್ಕೃತಿಯ ಕಾಲಕ್ಕೂ ಇತ್ತು. ಅಂದರೆ ಅದು ರೈತ ಬದುಕಿಗೆ ಸವಾಲೇ ಆಗಿತ್ತು ಅದಕ್ಕೆ ಪುರವಂತರ ಸಮ್ಮೇಳದವರಲ್ಲಿ ಲಿಂಗಬೀರರ (ಅಂದಿನ ಕಾಯಕಕ್ಕೆ ಯಾವುದೇ ಹೆಸರಿದ್ದಿರಲಿಲ್ಲ) ಬೆಂಬಲ ಪಡೆದು ಕೃಷಿಕ ಪ್ರತಿನಿಧಿಯಾಗಿ ಪ್ರತಿಭಟನೆ, ಹೋರಾಟ ನಡೆಸಿದವನು ವೀರಭದ್ರನಾಗಿದ್ದಾನೆ. ಹೀಗೆ ರೈತ ಪ್ರತಿಭಟನೆಯ ಮೊದಲ ಉದಾಹರಣೆಯನ್ನು ಗೋಗ್ರಹಣ ನಿರಸನದ ಮೂಲಕ ಅವನು ತೋರಿಸುವಂತಿದೆ. ಈ ಅಭಿಪ್ರಾಯಕ್ಕೆ ಪೌರಾಣಿಕ, ಸಂಪ್ರದಾಯಿಕ ಲೇಪನವಿದ್ದರೂ ಋಗ್ವೇದಿಯ ವರ್ಣನೆಯ ಗೋತ್ರಾರ್ಥ, ಗೋತ್ರ ಪುರುಷ, ಗೋತ್ರಾರಿ, ಇತ್ಯಾದಿ ಶಬ್ದಗಳು ಇಲ್ಲಿ ಐತಿಹಾಸಿಕ ಎಳೆಗಳನ್ನು ನೇಯ್ದಿರುವುದೂ ಸ್ಪಷ್ಟವೆನ್ನಿಸುತ್ತದೆ.

ಭಾರತದ ರೈತ ಹೋರಾಟಗಳನ್ನು ಒಟ್ಟಾರೆಯಾಗಿ ಆಗಲಿ, ಕರ್ನಾಟಕದ ರೈತ ಹೋರಾಟಗಳನ್ನು ಪ್ರಾದೇಶಿಕವಾಗಿ ಅವಲೋಕಿಸಿದರೆ, ಇವೆಲ್ಲಕ್ಕೂ ಹೋರಾಟಗಳ ಚರಿತ್ರೆಯೊಂದು ಪ್ರೇರಕ ಹಿನ್ನೆಲೆಯಾಗಿರುವುದು ಸ್ಪಷ್ಟ ಅಂದರೆ ಹೋರಾಟಗಳು ಪ್ರಜ್ಞಾ ಪರಂಪರೆಯ ನೆಲೆಗಟ್ಟನ್ನು ಒದಗಿಸುತ್ತದೆ. ರೈತ ಶೋಷಣೆಯ ವಿರುದ್ಧ ವರ್ತಮಾನದ ಚಳವಳಿಗಳನ್ನಷ್ಟೆ ಸಡಗರಿಸಿ ಹೇಳಿದರ, ಪಂಥೀಯ ದೋಷವು ತಟ್ಟಬಹುದು. ಇಲ್ಲಿ ರೈತರ ಚಳವಳಿಗಳಿಗೆ ಇರುವ ವಿವಿಧ ಕಾರಣಗಳನ್ನು, ಅದರ ಅನೇಕ ಆಯಾಮಗಳನ್ನು ನೋಡಬಹುದಾಗಿದೆ.

ಕರ್ನಾಟಕದ ರೈತ ಹೋರಾಟಗಳು ಭಾರತದ ರೈತ ಹೋರಾಟಗಳಿಂದ ಪ್ರಭಾವಿತವೆಂದರೆ ಅದು ಆಧುನಿಕ ಹೋರಾಟಗಳ ದೃಷ್ಟಿಯಿಂದ ಸರಿ ಎನ್ನಬಹುದು. ರೈತನ ಶಕ್ತಿ ಸ್ಥಾನವನ್ನು ಭಾರತೀಯ ಶಕ್ತಿ ಕೂಟದಲ್ಲಿ ಗಮನಿಸಿದರೆ ಶೋಷಣೆಯ ಶಕ್ತಿ ಕೂಟವಾದ ಜಮೀನುದಾರ, ಸಾಹುಕಾರ ಹಾಗೂ ಆಳುವ ವರ್ಗದ ಶೋಷಣೆ ವಿರುದ್ಧ ಸಂಘಟಿತರಾಗುವುದು, ಆಗ ನಡೆಸುವ ಪ್ರಗತಿಪರ ಹೋರಾಟದ ನೆಲೆಯ ರೈತ ಶಕ್ತಿಯ ನೆಲೆ ಎಂದು ಹೇಳಬಹುದು. ಇದನ್ನು ಆಧುನಿಕ ಪರಿಕಲ್ಪನೆಯಲ್ಲಿ ವಿಸ್ತಾರಗೊಂಡ ರೈತರ ಚಳವಳಿಯ ಒಂದು ತಾತ್ವಿಕ ನೆಲೆ ಎನ್ನಬಹುದು. ಕಾರಣ ಅಂದಿನ ಒಡೆಯ ರೈತ ಇವರ ಕುರಿತ ಪರಿಕಲ್ಪನೆಗಳನ್ನು ಆಯಾ ವರ್ತಮಾನದ ಸಾಂಸ್ಕೃತಿಕ ನಿಲುವಿನ ಮೂಲಕ ಗ್ರಹಿಸಬೇಕಾಗುತ್ತದೆ.

ಏಕೀಕರಣ ಪೂರ್ವ ರೈತ ಚಳವಳಿಗಳಲ್ಲಿ ಧಣಿ ಮತ್ತು ಒಕ್ಕಲುತನ ಸಂಬಂಧಗಳು ಭಾವನಾತ್ಮಕ ಸಂಬಂಧಗಳನ್ನು ತೀರಾ ಕಳಚಿಕೊಂಡಿದ್ದವು ಎನ್ನುವಂತಿಲ್ಲ. ಕಿಸಾನ್ ಸಭಾ ಹಾಗೂ ಪ್ರತ್ಯೇಕ ರೈತ

ಸಂಘಟನೆಗಳು ರೈತರಲ್ಲಿ ರಾಜಕೀಯ ಪ್ರಜ್ಞೆ, ಹಕ್ಕಿನ ಪ್ರಜ್ಞೆಗಳನ್ನು ಎಚ್ಚರಗೊಳಿಸುವಲ್ಲಿ ಯಶಸ್ವಿಯಾದರೂ ಅದು ಸಂಪೂರ್ಣವಾಗಿ ಬೇರುಗೊಳ್ಳಲಿಲ್ಲ. ಏಕೀಕರಣೋತ್ತರ ಚಳವಳಿಗಳು ತೀವ್ರತೆ, ಭರಾಟೆ, ಖಾರವಂತಿಕೆ, ಪರಿಹಾರದ ಹಕ್ಕೊತ್ತಾಯಗಳಿಗೆ ಏಕೀಕರಣ ಪೂರ್ವ ಚಳವಳಿಗಳು ತಾವು ಅನುಭವಿಸಿದ ಸೋಲು, ಪಡೆದ ಗೆಲವುಗಳನ್ನು ಮುಂದಿಟ್ಟು ಅವುಗಳಿಗೆ ಸ್ವಯಂ ಭೂ ವೇದಿಕೆಯನ್ನು ನಿರ್ಮಿಸಿಕೊಳ್ಳಲು ಒತ್ತಾಸೆಯಾದವು. ಜೊತೆಗೆ ಜಾಗತೀಕ ಸ್ಪರ್ಧಾ ಆಯಾಮಗಳೂ ಪ್ರೇರಣೆಯಾದವು ಎಂಬುದನ್ನು ಮರೆಯುವಂತಿಲ್ಲ. ಏಕೀಕರಣದ ಸಂಘಟನೆಗಳಿಗೂ ಈ ಸಮಯದ ರೈತ ಚಳವಳಿಗಳು ಸಾಕಷ್ಟು ನೆರವಾಗುವುದನ್ನು ರೈತ ಸಂಘಟನೆಯ ನೆಲೆಯೂ ವಿಸ್ತರಿಸುತ್ತವೆ.

ನಮ್ಮ ಈ ಕೃಷಿ ಕಾರ್ಯ ಪರಂಪರೆಯನ್ನು ರೈತ ಸತ್ಯಾಗ್ರಹ ಚಳವಳಿ ಎಂಬ ಶಬ್ದಗಳನ್ನು ಅಧುನಿಕ ಮೌಲ್ಯಮಾಪನಕ್ಕೆ ಮೀಸಲಿರಿಸಿದರೆ, ಪಂಥೀಯ ಅಥವಾ ವರ್ಗೀಯ ಎಂಬ ಕಲ್ಪನೆಗೆ ಮಿತಿಗೊಳಿಸಿದಂತಾಗುತ್ತದೆ. ಇವುಗಳನ್ನೆಲ್ಲ ಆಯಾ ಕಾಲದ ಪರಿಭಾಷೆ ಬದುಕು ಹಾಗೂ ಮೌಲ್ಯಗಳ ಹಿನ್ನೆಲೆಯಲ್ಲಿ ಅರ್ಥೈಸಬೇಕು. ಸಮಕಾಲೀನ ನಿಲುವುಗಳ ಪರಂಪರೆಯ ಸೆಲೆಯೇ ಸಾಂಸ್ಕೃತಿಕ ಒತ್ತಡಗಳ ಮಾನದಂಡಗಳಾಗಿರಬಹುದು. ಹೀಗಾಗಿ ರೈತರು ಬೇಸಾಯ, ದನಕರು, ಭೂಮಿ, ಬೆಳೆ ಯಾವುದೇ ಒಂದಕ್ಕೆ ಸಂಬಂಧಪಟ್ಟರೂ ಈ ಮೇಲಿನವುಗಳನ್ನು ಲಕ್ಷಿಸಬೇಕಾಗುತ್ತದೆ. ಇದು ಒಬ್ಬ ವ್ಯಕ್ತಿ ಒಂದು ಸಮುದಾಯ, ಪ್ರಾತಿನಿಧಿಕ ಸಂಘಟನೆಯ ರೂಪದಲ್ಲಿ ತೋರಿಸಿಕೊಳ್ಳಬಹುದು. ಜನಾಂಗಿಕ, ಪ್ರಾದೇಶಿಕ ಆಳ್ವಿಕೆ, ಧಾರ್ಮಿಕ ಜಾತೀಯ ವರ್ಣೀಯ, ವರ್ಗೀಯ, ಪಂಥೀಯ ನೆಲೆಗಳೂ ಇಲ್ಲಿ ತಲೆ ಎತ್ತಬಹುದು. ಹೀಗಾಗಿ ಈ ಶಬ್ದಗಳ ಚಾಲ್ತಿಯ ಕಾಲದ ಅರ್ಥಗಳ ಹಿನ್ನಲೆಯಲ್ಲಿ ಗಮನಿಸಿದರೆ ಕ್ರಮಾಗತ ಇತಿಹಾಸ, ಸಾಂಸ್ಕೃತಿಕ ಅರ್ಥ ನಿಷ್ಪತ್ತಿಗಳು ಒದಗುತ್ತವೆ. ಪ್ರತಿಭಟನೆ, ಸತ್ಯಾಗ್ರಹ, ಚಳವಳಿ ಇವೆಲ್ಲ ಇಂದಿನ ಸಂದರ್ಭದ ಪರಿಭಾಷೆ ಹಾಗೂ ತೀವ್ರತೆ ಎನ್ನಿಸಿವೆ. ಅಂದಿನ ಈ ಪರಿಭಾಷೆ ದೂರು, ದುಮ್ಮಾನ, ವಿವಾದ, ನಿಯೋಗ ಪ್ರಜ್ಞಾಸ್ಪರ್ಶ ಇತ್ಯಾದಿ ರೂಪಗಳಾಗಿದ್ದಿರಬಹುದು. ನೊಂದ ನೋವುಗಳಿಗೆ ಪರಿಹಾರ ದೊರಕಿತೋ ಇಲ್ಲವೋ ಅರಿತು ಅಂಥ ಪರಂಪರೆ ನಮ್ಮ ಸಾಂಸ್ಕೃತಿಕ ಸ್ತರಗಳಲ್ಲಿ ಅಡಕಗೊಂಡಿದೆ. ಪ್ರಾಚೀನ ರೈತ ಸಮುದಾಯದ ಪ್ರತಿಭಟನಾ ಸ್ವರೂಪ ಇಂದಿನ ರೈತರ ಸಮುದಾಯದ ಹೋರಾಟ ಚಳವಳಿ ಬಂಡಾಯದ ಸ್ವರೂಪದ್ದಾಗಿರಲಿಲ್ಲ. ಅದು ಅಂದಿನ ಸಾಮಾಜಿಕ, ಧಾರ್ಮಿಕ, ಆರ್ಥಿಕ, ರಾಜಕೀಯ ಮೌಲ್ಯ ವ್ಯವಸ್ಥೆಯನ್ನು ಅವಲಂಬಿಸಿತ್ತೆನ್ನಬಹುದು. ಶಿಲಾಶಾಸನಗಳಲ್ಲಿ ಈ ಕುರಿತು ಸೂಚನೆಗಳು ಕ್ವಚಿತ್ತಾಗಿ ದೊರಕುತ್ತವೆ. ಸದ್ಯ ಮೇಲಿನ ಚಳುವಳಿ ಸಂಬಂಧದಲ್ಲಿ ವಿಕಸನಗೊಳ್ಳುತ್ತ ಬಂದ ಅರ್ಥಗಳನ್ನು ಪರಿಶೀಲಿಸಬೇಕು.

ಒಟ್ಟಿನಲ್ಲಿ ರೈತರು ನಡೆಸುವ ವಿವಿಧ ಬಗೆ ಸಾಮೂಹಿಕ ಪ್ರತಿಭಟನೆಗಳಿಗೆ ರೈತ ಚಳವಳಿಗಳು ಎಂದು ಇತ್ತೀಚೆಗೆ ಕರೆಯಲಾಗಿದೆ. ಇದು ಮುಂದುವರೆದು ರೈತರ ಬಂಡಾಯ, ಹೋರಾಟ, ಚಳವಳಿ, ಸತ್ಯಾಗ್ರಹ ಎಲ್ಲ ಪ್ರತಿಭಟನೆಗಳನ್ನು ಒಟ್ಟಾರೆಯಾಗಿ ಚಳವಳಿ ಎಂದು ಕರೆಯಲಾಗಿದೆ. ಗುಲಬರ್ಗಾ ಜಿಲ್ಲೆಯಲ್ಲಿಯೂ ಇಂಥ ಹಲವು ಹೋರಾಟಗಳು ನಡೆದಿವೆ; ಈಗಲೂ ನಡೆಯುತ್ತಿವೆ. ರೈತ ಚಳವಳಿಗಳು

ನಮ್ಮ ಸಮಾಜ ರಚನೆಯಲ್ಲಿ ಮೂಲಭೂತ ಬದಲಾವಣೆಗಳನ್ನು ತಂದರೆ ಅವುಗಳನ್ನು 'ರೈತ ಕ್ರಾಂತಿ' ಎನ್ನಬಹುದು. ಇಂಥ ಪೂರ್ಣ ಪ್ರಮಾಣದ ಹೋರಾಟಗಳು ವಿರಳ, ಅಲ್ಲಲ್ಲಿ ಕ್ಷಿಪ್ರವಾದ ಸ್ಥಳೀಯ ಸೀಮಿತ ಪರಿಣಾಮಗಳುಳ್ಳ ಹೋರಾಟಗಳು ನಡೆದಿವೆ. ಗುಲಬರ್ಗಾ ಜಿಲ್ಲೆಯಲ್ಲಿ ರೈತರು ಮಾಡಿದ ಸತ್ಯಾಗ್ರಹಗಳ ಹೊಸ ಬಗೆಯ ಬದಲಾವಣೆಯಾಗಿವೆ. ರೈತರ ಸಮಸ್ಯೆಗಳಿಗೆ ಪರಿಹಾರಗಳನ್ನು ಕಂಡುಕೊಳ್ಳುವಲ್ಲಿ ಚಳವಳಿಯ ಪಾತ್ರ ಮಹತ್ವದ್ದಾಗಿದೆ.

## ಅಧ್ಯಯನದ ಉದ್ದೇಶ

ಭಾರತವು ಕೃಷಿ ಪ್ರಧಾನ ರಾಷ್ಟ್ರ. ಹೀಗಾಗಿ ಇಲ್ಲಿ ಜನ ಸಾಮಾನ್ಯರ ಬದುಕಿನೊಂದಿಗೆ ವ್ಯವಸಾಯ ಬಿಡಿಸಲಾರದ ನಂಟಾಗಿ ಬೆಸೆದುಕೊಂಡಿದೆ. ಇಲ್ಲಿ ರೈತ ಚಳವಳಿಯು ಪ್ರಾಚೀನ ಕಾಲದಿಂದಲೂ ಒಂದಲ್ಲ ಒಂದು ರೀತಿಯ ಚಳವಳಿಗಳು ನಡೆದಿರುವುದನ್ನು ಕಾಣುತ್ತೇವೆ. ಇಂತಹ ಚಳವಳಿಯ ಚಾರಿತ್ರಿಕ ಹಿನ್ನೆಲೆ, ಮಹತ್ವ, ಮರೆಯಾದ ವಿಷಯಗಳನ್ನು ತಿಳಿಸುವುದು ಇದರ ಉದ್ದೇಶವಾಗಿದೆ. ಈ ರೈತ ಚಳವಳಿಗಳ ಬಗ್ಗೆ ಸಮಗ್ರ ಅಧ್ಯಯನಗಳು ಈವರೆಗೆ ನಡೆದಿಲ್ಲ. ಇದರ ಬಗ್ಗೆ ಪತ್ರಿಕೆಗಳಲ್ಲಿ ಸಣ್ಣ ಪುಟ್ಟ ಲೇಖನಗಳು ಮಾತ್ರ ಪ್ರಕಟವಾಗಿವೆ. ಈ ಚಳವಳಿಗಳ ಕುರಿತಂತೆ ಸಂಪೂರ್ಣ ಅಧ್ಯಯನ ಕಂಡುಬರುವುದಿಲ್ಲವಾದ್ದರಿಂದ ಈ ವಿಷಯವನ್ನು ಪ್ರಸ್ತುತ ಸಂಶೋಧನೆಗೆ ವಸ್ತು ವಿಷಯವನ್ನಾಗಿ ಕೈಗೆತ್ತಿಕೊಳ್ಳಲಾಗಿದೆ.

ಗುಲಬರ್ಗಾವು ಅತಿ ಹೆಚ್ಚು ಬರಗಾಲಕ್ಕೆ ಸಿಲುಕಿರುವ ಪ್ರದೇಶವಾಗಿದೆ. ಈ ಪ್ರದೇಶವು ಸಧಾ ಅತಿವೃಷ್ಟಿ ಹಾಗೂ ಅನಾವೃಷ್ಟಿಗ ಒಳಪಟ್ಟಿರುವುದಾಗಿದೆ. ಈ ಪ್ರದೇಶದ ರೈತರಿಗೆ ಅಸಹಾಯಕ ಸ್ಥಿತಿಯಲ್ಲಿ ಯಾವುದೆ ಸಹಕಾರ ದೊರೆಯದಿದ್ದಾಗ, ಹಾಗೂ ಸರಕಾರದ ಸೌಲಭ್ಯ ಸರಿಯಾಗಿ ಪಡೆಯದಿದ್ದಾಗ, ರೈತರು ತಮ್ಮ ಸಮಸ್ಯೆಗಳು ಮತ್ತು ಕಷ್ಟಗಳನ್ನು ಪರಿಹರಿಸಿಕೊಳ್ಳಲು, ವ್ಯವಸ್ಥೆಯ ವಿರುದ್ಧ ಈ ಪ್ರದೇಶದಲ್ಲಿ ನಡೆಸಿದ ಚಳವಳಿಗಳ ಸಾಧಕ ಭಾದಕಗಳೇನು ಎಂಬುದನ್ನು ತಿಳಿಸುವುದು ಇದರ ಆಶಯವಾಗಿದೆ.

ಬರಪೀಡಿತ ಜನರ ಹೋರಾಟ ಚಳವಳಿ, ರಸ್ತೆ ತಡೆ, ಬಂದ್, ಉಪವಾಸ, ಸತ್ಯಾಗ್ರಹಗಳನ್ನು ರೈತರು ನಡೆಸುತ್ತಾ ಬಂದಿದ್ದಾರೆ. ಇದಕ್ಕೆ ರೈತ ಚಳವಳಿ ಎನ್ನುವರು. ಈಗಲೂ ಹೋರಾಟ ನಡೆಸುತ್ತಿದ್ದಾರೆ. ಇಂಥ ಹೋರಾಟವನ್ನು ಯಾರೂ ನಡೆಸುತ್ತಿದ್ದಾರೆ? ಏಕೆ ನಡೆಸಿದ್ದಾರೆ? ಪ್ರಮುಖ ಹೋರಾಟಗಾರರು ಯಾರು? ಇವರ ಹೋರಾಟದ ಹಾದಿ ಯಾವ ರೀತಿ ಇತ್ತು? ಇದಕ್ಕೆ ಸರಕಾರದ ಪ್ರತಿಕ್ರಿಯೇ ಏನು? ಹೋರಾಟದ ಪ್ರತಿಫಲ ಏನು? ಎಂಬ ವಿಚಾರಗಳನ್ನು ಬೆಳಕಿಗೆ ತರುವುದು ಈ ಅಧ್ಯಯನದ ಆಶಯವಾಗಿದೆ.

ಗುಲಬರ್ಗಾ ಜಿಲ್ಲೆಯು ರೈತ ಚಳವಳಿಯ ಹೋರಾಟಕ್ಕೆ ಎಡೆಮಾಡಿ ಕೊಟ್ಟಿದೆ. ಅಂದರೆ ಒಂದುಕಡೆ ಬರಗಾಲದ ಬೇಗೆಯಲ್ಲಿ ಬೇಯುತ್ತಿರುವ ಬಯಲು ನಾಡಿನ ಜನರು, ರೈತರ ಸಮಸ್ಯೆಯ ವಿರುದ್ಧ ಹೋರಾಟ ಮಾಡಿದರೆ, ಮತ್ತೊಂದು ಕಡೆ ಪ್ರಕೃತಿ ವಿಕೋಪಕ್ಕೆ ಸಿಲುಕಿರುವ ರೈತರ ಬೆಳೆಗಳಿಗೆ ಪರಿಹಾರ ಹಾಗೂ ರಿಯಾಯಿತಿ ದರದಲ್ಲಿ ಬೀಜಗೊಬ್ಬರ ನೀಡುವಂತೆ ರೈತರು ಹೋರಾಟ ನಡೆಸುತ್ತಿದ್ದಾರೆ. ಇದರ ಹಿಂದಿನ ಉದ್ದೇಶಗಳೇನು? ಎಂಬುದನ್ನು ತಿಳಿಸುವುದು ಈ ಅಧ್ಯಯನದ ಉದ್ದೇಶವಾಗಿದೆ.

## ಅಧ್ಯಯನದ ವ್ಯಾಪ್ತಿ

ಪ್ರಸ್ತುತ ಅಧ್ಯಯನವು ತನ್ನದೇ ಆದ ವೈಶಾಲ್ಯತೆಯನ್ನು ಹೊಂದಿದೆ. ಈ ಅಧ್ಯಯನದ ವ್ಯಾಪ್ತಿಯು ಗುಲಬರ್ಗಾ ಜಿಲ್ಲೆಯ ಜೇವರ್ಗಿ, ಚಿತ್ತಾಪುರ, ಚಿಂಚೋಳಿ, ಸೇಡಂ, ಅಫಜಲಪುರ, ಆಳಂದ ಹಾಗೂ ಗುಲಬರ್ಗಾ ತಾಲೂಕುಗಳ ಪ್ರದೇಶಗಳನ್ನೊಳಗೊಂಡಿದೆ. ಹಾಗೆಯೇ ಈ ಬಗ್ಗೆ ಸಂಭವಿಸಿದ ಚಳವಳಿಗಳು, ಸಮಕಾಲೀನ ಸಂದರ್ಭದ ಹೋರಾಟಗಳು ಮತ್ತು ಹೋರಾಟಗಾರರು ಹಾಗೂ ಪ್ರಸ್ತುತ ಏಕೀಕರಣೋತ್ತರ ನಂತರದಿಂದ ೨೦೧೦ವರೆಗೆ ಗುಲಬರ್ಗಾ ಜಿಲ್ಲೆಯ ರೈತರ ಚಳವಳಿಗಳ ಎಲ್ಲಾ ಸಂಗತಿಗಳನ್ನು ಇಲ್ಲಿ ಸಂಕ್ಷಿಪ್ತವಾಗಿ ಚರ್ಚಿಸಲಾಗುವುದು.

## ಅಧ್ಯಯನದ ವಿಧಾನ

**'ಗುಲಬರ್ಗಾ ಜಿಲ್ಲೆಯ ರೈತ ಚಳವಳಿಗಳು ಚಾರಿತ್ರಿಕ ಅಧ್ಯಯನ'** ಎಂಬ ಈ ಅಧ್ಯಯನವು ಚರಿತ್ರೆ ಸಂಶೋಧನೆಯ ವಿಧಿ ವಿಧಾನಗಳನ್ನು ಒಳಗೊಂಡಿದೆ. ಇಲ್ಲಿ ಪ್ರಾಥಮಿಕ ಹಾಗೂ ಅನುಷಂಗಿಕ ಆಕರಗಳನ್ನು ಬಳಸಿಕೊಳ್ಳಲಾಗುವುದು. ಗುಲಬರ್ಗಾ ಜಿಲ್ಲೆಯ ರೈತ ಚಳವಳಿಯ ಬಗ್ಗೆ ನಡೆದ ಹೋರಾಟ, ಪ್ರತಿಭಟನೆ, ಸತ್ಯಾಗ್ರಹ, ಉಪವಾಸಗಳ ಬಗ್ಗೆ ನಡೆದ ಚಳವಳಿಯ ವಿವರಗಳಿರುವ ಚಾರಿತ್ರಿಕ ದಾಖಲೆ ಮತ್ತು ವರದಿಗಳಿಂದಲೂ ಮಾಹಿತಿಯನ್ನು ಸಂಗ್ರಹಿಸಲಾಗುವುದು. ಸರಕಾರದ ಗೆಜೆಟಿಯರುಗಳು ಸಂಶೋಧನಾ ಪ್ರಬಂಧಗಳು, ಪತ್ರಿಕೆಗಳು, ನಿಯತಕಾಲಿಕೆಗಳು ಮತ್ತು ಸ್ಮರಣ ಸಂಚಿಕೆಗಳಲ್ಲಿ ಬಿಡಿ ಬಿಡಿಯಾಗಿ ಪ್ರಕಟವಾದ ಲೇಖನಗಳಿಂದ ಮಾಹಿತಿ ಸಂಗ್ರಹಿಸಲಾಗುವುದು.

ಗುಲಬರ್ಗಾ ಜಿಲ್ಲೆಯ ರೈತ ಚಳವಳಿಯ ಬಗ್ಗೆ ಕ್ಷೇತ್ರಕಾರ್ಯ ಕೈಗೊಂಡು, ಹೋರಾಟ ನಡೆಸಿದ ಹೋರಾಟಗಾರರನ್ನು ಸಂದರ್ಶಿಸಿ, ಅವರಿಂದ ಈ ಚಳುವಳಿಯ ಕುರಿತು ಮಾಹಿತಿ ಸಂಗ್ರಹಿಸಲಾಗುವುದು. ಈ ಚಳವಳಿಯ ಬಗ್ಗೆ ವಾದ ಪ್ರತಿವಾದಗಳನ್ನು ಚರ್ಚೆಗೆ ಎತ್ತಿಕೊಂಡು ವರ್ಗೀಕರಿಸಿ ಕಾಲಾನುಕ್ರಮವಾಗಿ ನಡೆದ ಘಟನೆಗಳನ್ನು ಇಲ್ಲಿ ವಿಶ್ಲೇಷಿಸಲಾಗುತ್ತದೆ.

## ಅಧ್ಯಯನದ ಸ್ವರೂಪ

ಗುಲಬರ್ಗಾ ಜಿಲ್ಲೆಯ ರೈತ ಚಳವಳಿಗಳು : ಚಾರಿತ್ರಿಕ ಅಧ್ಯಯನ ತನ್ನದೆ ಆದ ಸ್ವರೂಪವನ್ನು ಹೊಂದಿದೆ. ಇದರಲ್ಲಿ ಅಧ್ಯಯನದ ಅನುಕೂಲತೆಗಾಗಿ ಆರು ಅಧ್ಯಾಯಗಳನ್ನಾಗಿ ರೂಪಿಸಿಕೊಳ್ಳಲಾಗಿದೆ. ಈ ಆರು ಭಾಗಗಳು ಒಳಗೊಂಡ ವಿಷಯ ಮತ್ತು ಅದರ ತಾತ್ವಿಕ ಸ್ವರೂಪ ಹೀಗಿದೆ.

ಅಧ್ಯಾಯ ಒಂದರಲ್ಲಿ ಅಧ್ಯಯನದ ಉದ್ದೇಶ, ವ್ಯಾಪ್ತಿ ವಿಧಾನವನ್ನು ವಿವರಿಸಲಾಗಿದೆ. ಇಲ್ಲಿ ಈ ಅಧ್ಯಯನದ ಅಗತ್ಯ ಮತ್ತು ಚರಿತ್ರೆಯ ಅಧ್ಯಯನದ ವಿಧಾನಗಳ ವಿಮರ್ಶಾತ್ಮಕ ಟೀಕೆಗಳ ಜೊತೆಗೆ, ಅದನ್ನು ಮೀರುವ ಹೊಸ ವಿಧಾನಗಳ ಚರ್ಚೆ ಇದೆ.

ಅಧ್ಯಾಯ ಎರಡರಲ್ಲಿ ಗುಲಬರ್ಗಾ ಜಿಲ್ಲೆಯ ಭೌಗೋಳಿಕ ಅಂಶಗಳು, ಮತ್ತು ಚಾರಿತ್ರಿಕ ಹಿನ್ನಲೆ ಹಾಗೂ ಧಾರ್ಮಿಕ, ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ, ಅಂಶಗಳ ಹಿನ್ನೆಲೆಯನ್ನು ಒಂದೆಡೆ ದಾಖಲಿಸಲು ಇಲ್ಲಿ ಪ್ರಯತ್ನಿಸಲಾಗಿದೆ.

ರೈತ ಚಳವಳಿಯ ಚಾರಿತ್ರಿಕ ಹಿನ್ನಲೆ ರೈತರು ಎಂದರೆ ಯಾರು, ರೈತ ಚಳವಳಿ ಎಂದರೇನು? ರೈತ ಚಳವಳಿಯ ಉದ್ದೇಶಗಳು ಹಾಗೂ ತತ್ವಗಳು, ರೈತ ಚಳವಳಿಯು ನಡೆದು ಬಂದ ದಾರಿ, ರೈತ ಚಳವಳಿಯ ಸಂಘಟನೆ, ಕರ್ನಾಟಕದಲ್ಲಿ ರೈತ ಸಂಘಟನೆಯ ಸ್ಥಾಪನೆಗಳು ಇಂಥ ವಿಚಾರಗಳನ್ನು ಮೂರನೇ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

ನಾಲ್ಕನೇ ಅಧ್ಯಾಯದಲ್ಲಿ 'ಗುಲಬರ್ಗಾ ಜಿಲ್ಲೆಯ ರೈತ ಚಳವಳಿಗಳು : ಚಾರಿತ್ರಿಕ ಅಧ್ಯಯನ' ವಿಷಯಕ್ಕೆ ಸಂಬಂಧಿಸಿದ ವಿಚಾರಗಳು ಹಾಗೂ ಈ ಚಳವಳಿಯಲ್ಲಿ ನಡೆದ ಹೋರಾಟಗಳು ಮತ್ತು ಹೋರಾಟಗಳಲ್ಲಿ ಭಾಗವಹಿಸಿದ ಸಂಘ-ಸಂಸ್ಥೆಗಳು, ರಾಜಕೀಯಪಕ್ಷಗಳು, ರೈತಸಂಘಟನೆಗಳು, ರೈತರು, ಮಠಮಾನ್ಯಗಳು, ವಿದ್ಯಾರ್ಥಿಗಳು, ಮಹಿಳೆಯರು ತಮ್ಮ ಹಕ್ಕನ್ನು ಪಡೆಯುವ ನಿಟ್ಟಿನಲ್ಲಿ ಹೋರಾಟ ನಡೆಸಿದ ಪ್ರಮುಖ ಘಟನೆಗಳನ್ನು ವಿವರಿಸಲಾಗಿದೆ.

ಈ ಚಳವಳಿಗೆ ಒಳಪಡುವ ಪ್ರದೇಶದ ರೈತರ ಮತ್ತು ಜನರ ಸಮಸ್ಯೆಗಳೇನು? ಇದಕ್ಕೆ ಸರಕಾರದ ಪರಿಹಾರವೇನು? ಎಂಬ ವಿಚಾರಗಳನ್ನು ಅಧ್ಯಾಯ ಐದರಲ್ಲಿ ತಿಳಿಸಲಾಗಿದೆ. ಹಾಗೂ ಸಮಕಾಲೀನ ಸ್ಥಿತಿಗತಿಯಲ್ಲಿ ಈ ಚಳವಳಿಯು ಯಾವ ರೂಪ ಪಡೆದುಕೊಂಡಿದೆ. ಅಧ್ಯಾಯ ಆರು ಸಮಾರೋಪದಲ್ಲಿ, ಅಧ್ಯಯನದ ಫಲಿತಗಳನ್ನು ದಾಖಲಿಸಲಾಗಿದೆ. ಅನುಬಂಧದಲ್ಲಿ ಛಾಯಾಚಿತ್ರ, ನಕ್ಷೆ, ಭೂಪಟ, ಗ್ರಂಥಋಣವನ್ನು ಕೊಡಲಾಗಿದೆ.

## ಅಧ್ಯಾಯ - ಎರಡು

# ಭೌಗೋಳಿಕ ಪರಿಚಯ ಮತ್ತು ಚಾರಿತ್ರಿಕ ಹಿನ್ನೆಲೆ

ಗುಲಬರ್ಗಾ ಜಿಲ್ಲೆಯು ತನ್ನದೇ ಆದ ಭೌಗೋಳಿಕ ವ್ಯಾಪ್ತಿ ಹೊಂದಿದೆ. ಇದು ಕರ್ನಾಟಕದ ಉತ್ತರ ಭಾಗದಲ್ಲಿದೆ. ಇದನ್ನು ೧೯೫೬ರಲ್ಲಿ ರಾಜ್ಯ ಪುನರ್ವಿಂಗಡನೆಯಾದಾಗ ಹೈದರಾಬಾದ ಕರ್ನಾಟಕ ಪ್ರದೇಶದಿಂದ ಅಂದಿನ ಮೈಸೂರು ರಾಜ್ಯಕ್ಕೆ ಸೇರಿಸಲಾಯಿತು. ೧೯೫೬ರಲ್ಲಿ ಗುಲಬರ್ಗಾ ಜಿಲ್ಲೆಯು ವಿಶಾಲವಾದ ಮತ್ತು ಸಮತಟ್ಟಾದ ಪ್ರದೇಶದೆ. ೭೬°-೦೪° ಮತ್ತು ೨೨°-೪೨° ರೇಖಾಂಶ ಹಾಗೂ ೧೬°-೧೨° ಮತ್ತು ೧೭°-೪೬° ಉತ್ತರ ಅಕ್ಷಾಂಶಗಳ ನಡುವೆ ಹರಡಿಕೊಂಡಿದೆ. ಜಿಲ್ಲೆಯ ಉತ್ತರಕ್ಕೆ ಮಹಾರಾಷ್ಟ್ರ ರಾಜ್ಯದ ಸೋಲ್ಲಾಪುರ ಮತ್ತು ಉಸ್ಮಾನಾಬಾದ ಜಿಲ್ಲೆಗಳನ್ನು ಗಡಿಯಾಗಿ ಹೊಂದಿದೆ. ಪೂರ್ವ ಭಾಗದಲ್ಲಿ ಆಂಧ್ರಪ್ರದೇಶದ ಮೇಡಕ್ ಮತ್ತು ಮೆಹಬೂಬ್‌ನಗರ ಜಿಲ್ಲೆಗಳ ಗಡಿಯವರಿಗೆ ವಿಸ್ತರಿಸಿದೆ. ಉತ್ತರದಲ್ಲಿ ಬೀದರ ಜಿಲ್ಲೆ, ದಕ್ಷಿಣದಲ್ಲಿ ಯಾದಗಿರಿ ಜಿಲ್ಲೆ ಮತ್ತು ಪಶ್ಚಿಮದಲ್ಲಿ ವಿಜಾಪುರ ಜಿಲ್ಲೆಯಿಂದ ಸುತ್ತುವರಿಯಲ್ಪಟ್ಟಿದೆ. ದಕ್ಷಿಣ ಭಾಗದಲ್ಲಿ ಭೀಮಾ ನದಿಯು ಗುಲಬರ್ಗಾ ಮತ್ತು ಯಾದಗಿರಿ ಜಿಲ್ಲೆಗಳ ಎಲ್ಲೆಯಾಗಿ ಹರಿಯುತ್ತದೆ. ಈ ಗುಲಬರ್ಗಾ ಜಿಲ್ಲೆಯಲ್ಲಿ ಮುಖ್ಯವಾಗಿ ಭೀಮಾ ನದಿಯಿಂದ ತನ್ನ ಗಡಿಯನ್ನು ಗುರುತಿಸುವಲ್ಲಿ ಇದರ ಪಾತ್ರ ಬಹಳಷ್ಟು ಪ್ರಾಮುಖ್ಯತೆ ಪಡೆದಿದೆ. ಮತ್ತು ಈ ನದಿಯಿಂದ ಉದ್ದಿಮೆ, ಕೃಷಿ, ಕುಡಿಯುವ ನೀರನ್ನು ಈ ಪ್ರದೇಶದ ಜನರಿಗೆ ಒದಗಿಸುವುದಕ್ಕೆ ಈ ನದಿ ಅತಿ ಮುಖ್ಯ ಪಾತ್ರವಹಿಸುತ್ತದೆ. ಗುಲಬರ್ಗಾ ಜಿಲ್ಲೆಯು ನೈಸರ್ಗಿಕವಾಗಿ ಹಲವಾರು ಸಂಪತ್ತು ಭರಿತ ಖನಿಜ ನಾಡು ಎಂದು ಹೇಳಬಹುದು.

### ಗುಲಬರ್ಗಾದ ಹೆಸರಿನ ಮೂಲ

ಗುಲಬರ್ಗಾದ ಹೆಸರಿನ ಪದವು ಹಲವಾರು ವಿಭಿನ್ನ ಅರ್ಥ ಹಾಗೂ ಚಾರಿತ್ರಿಕ ಹಿನ್ನೆಲೆ ಹೊಂದಿದೆ. 'ಗುಲಬರ್ಗಾ'ವನ್ನು ಕಲುಬುರ್ಗಿ, ಕಲ್ಬುರ್ಗಿ ಮತ್ತು ಗುಲಬರ್ಗಾ ಎಂಬ ಪರ್ಯಾಯ ಹೆಸರುಗಳಿಂದ ಕರೆಯಲಾಗುತ್ತಿದೆ. ಗುಲಬರ್ಗಾ ಹೆಸರು ಐತಿಹಾಸಿಕವಾಗಿ ಸುಮಾರು ಕ್ರಿ.ಶ. ೧೨, ೧೩ನೇ ಶತಮಾನದ

ಚಿನಮುಳಿ ಶಿಲಾಶಾಸನದಲ್ಲಿ "ಕಲಂಬರಿಗೆ" ಎಂದು ಉಲ್ಲೇಖಿತಗೊಂಡಿದೆ. ಕ್ರಿ.ಶ. ೧೫೩೭ರ ಶಿರವಾಳದ ಶಿಲಾಶಾಸನದಲ್ಲಿ ಇದು ಕ್ರಮವಾಗಿ 'ಕಲುಬರಗೆ' ಹಾಗೂ ಕಲಬುರಿಗೆ ಎಂದು ದಾಖಲಾಗಿದೆ. ವಿಜಯನಗರಕ್ಕೆ ಭೇಟಿ ನೀಡಿದ ಪರ್ಷಿಯನ್ ರಾಯಬಾರಿ ಅಬ್ದುಲ್ ರಜಾಕನು 'ಗುಲಬರ್ಗಾ'ವನ್ನು "ಕಲಬುರ್ಗ್" ಎಂದು ಹೇಳಿದ್ದಾನೆ. ಗುಲಬರ್ಗಾ ಎಂಬ ನಾಮ ಪದದ ನಿಷ್ಪತ್ತಿಗೆ ಸಂಬಂಧಿಸಿದಂತೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯವಿದೆ. ಗುಲಬರ್ಗಾ ಹೆಚ್ಚು ಕಡಿಮೆ ಕಲಬುರಗಿ ಪದದ ಫಾರಸೀಕರಣವಾಗಿದ್ದು, ಫಾರಸೀಯಲ್ಲಿ 'ಗುಲ್' ಎಂದರೆ 'ಹೂವು' ಬರ್ಗ ಎಂದರೆ 'ಎಲ್ಲೆ' ಎಂಬ ಅರ್ಥವಿದೆ.[೨] ಹಾಗೆ ಇನ್ನೊಂದು ಅರ್ಥದಲ್ಲಿ ಕಲಬುರಗಿ ಎಂಬುವುದು ಕಲ್+ಬುರಗಿ, ಇದು 'ಕಲ್' ಎಂದರೆ ಕಲ್ಲಿನಿಂದ ಕೂಡಿದ ಪ್ರದೇಶ ಮತ್ತು ಕಲ್ಲಿನಲ್ಲಿ ಕಲೆಯನ್ನು ಗುರುಸುವುದು ಎಂಬ ಅರ್ಥವಿದೆ. "ಬುರಗಿ" ಎಂದರೆ ಅರಳು, ಬೆಳಗು, ವ್ಯಾಪಿಸು, ಹರಡುವುದು ಅರ್ಥವಿದೆ ಅಂದರೆ 'ಕಲಬುರಗಿ' ಎಂಬುವುದು ಕಲ್ಲಿನ ಪ್ರದೇಶವಾದ ಮತ್ತು ಕಲ್ಲಿನ ಕಲೆಯನ್ನು ಗುರುತಿಸುವುದನ್ನು ಕಂಡು ಈ ಪ್ರದೇಶಕ್ಕೆ ಕಲಬುರಗಿ ಎಂದು ಕರೆದಿರಬಹುದು. 'ಕಲಬುರಗಿ' ಎಂಬ ಅಚ್ಚ ಕನ್ನಡ ರೂಪವೇ ಮುಸ್ಲಿಂರರಿಗೆ ಮೊದಮೊದಲು ಕಲಬುರ್ಗ್ ಎಂದೆನಿಸಿ ಮುಂದೆ ಹಾಗೇ ಗುಲಬರ್ಗಾ ಎಂದಾದಂತೆ ತೋರುತ್ತದೆ. ಒಟ್ಟಿನಲ್ಲಿ 'ಕಲಬುರಗಿ' ಎಂಬ ಹೆಸರು ಕ್ರಿ.ಶ. ೧೬ನೇ ಶತಮಾನದವರೆಗೂ ರೂಡಿಯಲ್ಲಿದ್ದು ಮುಸ್ಲಿಮರ ಆಡಳಿತ ಪ್ರಭಾವದಿಂದಾಗಿ ನಂತರದಲ್ಲಿ ಗುಲಬರ್ಗಾ ರೂಪವನ್ನು ಪಡೆದಿದೆಯೆಂಬುದು ಜನಪದದ ವಾಡಿಕೆಯಾಗಿದೆ. ಆದರೂ 'ಕಲ್ಬುರ್ಗಿ' ಎಂಬ ಹೆಸರು ಈಗಲೂ ಹಳ್ಳಿ ಪ್ರದೇಶದ ಜನರು ಹಾಗೂ ಗುಲಬರ್ಗಾ ಹಿರಿಯ ನಾಗರಿಕರು 'ಕಲ್ಬುರ್ಗಿ' ಎಂದು ಕರೆಯುತ್ತಾರೆ.

ಭೀಮಾ, ಕೃಷ್ಣ, ಕಾಗಿಣ, ಮುಲ್ಲಾಮಾರಿ, ಬೆಣ್ಣೆತೊರೆ, ಅಮರಜಾ, ಕಾರಂಜಾ ಎಂಬ ಸಪ್ತನದಿಗಳ ಬೀಡು ಎಂದು ಕರೆಯುತ್ತಾರೆ.[೩] ಗುಲಬರ್ಗಾ ಜಿಲ್ಲೆಯಲ್ಲಿ ಆಳಂದ, ಅಫಜಲಪುರ, ಜೇವರ್ಗಿ, ಸೇಡಂ, ಚಿತ್ತಾಪುರ, ಚಿಂಚೋಳಿ ಮತ್ತು ಗುಲಬರ್ಗಾ ತಾಲೂಕಗಳನ್ನು ಒಳಗೊಂಡಿದೆ. ಈ ಜಿಲ್ಲೆಯ ಒಟ್ಟು ಭೌಗೋಳಿಕ ಪ್ರದೇಶವು ೧೬.೨೨೫ ಚ.ಕಿ.ಮೀ ಇದ್ದು, ರಾಜ್ಯದ ಶೇ. ೮.೪೬ರಷ್ಟು ಪ್ರದೇಶವನ್ನು ಒಳಗೊಂಡಿದೆ. ರಾಜ್ಯ ವಿಸ್ತೀರ್ಣದಲ್ಲಿ ಎರಡನೇ ದೊಡ್ಡ ಜಿಲ್ಲೆಯಾಗಿದೆ. (ಯಾದಗಿರ, ಶಹಾಪುರ, ಸುರಪುರ) ಸೇರಿಕೊಂಡು ಜಿಲ್ಲೆಯ ಒಟ್ಟು ಜನಸಂಖ್ಯೆ ೨೫.೮೨.೧೬೯ (ಇದು ೨೦೦೧ರ ಜನಗಣತಿಯ ಪ್ರಕಾರ) ಇದರಲ್ಲಿ ೧೯.೮೨.೩೬೪ ಗ್ರಾಮೀಣ ಪ್ರದೇಶದ ಜನಸಂಖ್ಯೆಯನ್ನು ಹೊಂದಿದೆ. ೬.೮೦.೮೦೨ ನಗರ ಪ್ರದೇಶದ ಜನಸಂಖ್ಯೆಯನ್ನು ಹೊಂದಲಾಗಿದೆ. ಜಿಲ್ಲೆಯ ಒಟ್ಟು ಸಾಕ್ಷರತೆಯ ಪ್ರಮಾಣ ೫೨.೦೬ಇದ್ದು, ಇದರಲ್ಲಿ ಪುರುಷ ಸಾಕ್ಷರತೆಯ ಪ್ರಮಾಣ ೩೮.೫೨ ಮತ್ತು ಮಹಿಳಾ ಸಾಕ್ಷರತೆ ೨೪.೪೬ ಪ್ರಮಾಣವನ್ನು ಹೊಂದಿದ್ದಾರೆ. ಸುಮಾರು ಶೇ. ೧೪ರಷ್ಟು ಸಾಕ್ಷರತೆಯ ಈ ವ್ಯತ್ಯಾಸವನ್ನು ಪುರುಷರಲ್ಲಿ ಮತ್ತು ಮಹಿಳೆಯರಲ್ಲಿ ಅಂದರೆ ಮಹಿಳೆಯ ಸಾಕ್ಷರತೆಯ ಪ್ರಮಾಣ ಶೇ.೧೪ರಷ್ಟು ಕಡಿಮೆ ಇದೆ.[೪]

ಕರ್ನಾಟಕದ ಗುಲಬರ್ಗಾ ಜಿಲ್ಲೆ ಅತೀ ಕಡಿಮೆ ಮಳೆ ಬೀಳುವ ಮತ್ತು ಬರಗಾಲಕ್ಕೆ ಸಿಲುಕುವ ಪ್ರದೇಶವಾಗಿದೆ. ಇಲ್ಲಿ ಕಡಿಮೆ ಪ್ರಮಾಣದ ನೀರಾವರಿ ಹೊಂದಿದೆ. ಅಂದರೆ ರಾಜ್ಯದ ಒಟ್ಟು ನೀರಾವರಿ ಪ್ರದೇಶದ ಶೇಕಡಾ ೨.೧೧ ಹೆಕ್ಟೇರ ಜಮೀನು ಮಾತ್ರ ನೀರಾವರಿಗೆ ಒಳಪಟ್ಟಿದೆ."

ಗುಲಬರ್ಗಾ ಜಿಲ್ಲೆಯ ರೈತರ ಒಕ್ಕಲುತನವು ಬಹುತೇಕ ಮಳೆಯನ್ನು ಅವಲಂಬಿಸಿರುವುದರಿಂದ, ಮೇಲಿಂದ ಮೇಲೆ ಭೀಕರ ಬರಗಾಲಗಳಿಗೆ ತುತ್ತಾಗುತ್ತ ಇರುತ್ತದೆ. ಈ ಪ್ರದೇಶವು ಕೈಗಾರಿಕಾ ಬೆಳವಣಿಗೆಗೆ ಸಂಬಂಧಿಸಿದಂತೆ ಇದು ರಾಜ್ಯದ ೧೨ನೇ ಸ್ಥಾನದಲ್ಲಿದೆ. ಈ ಪ್ರದೇಶದಲ್ಲಿ ಹರಿಯುವ ಕೃಷ್ಣಾ, ಭೀಮಾ ನದಿಗಳಿಂದಲೂ ಮುಲ್ಲಾಮಾರಿ, ಅಮರ್ಜಾ, ಕಾಗಿಣಾ, ಬೆಣ್ಣೆತೊರೆ, ಇವುಗಳಿಂದ ಕೃಷಿ ಕ್ಷೇತ್ರಕ್ಕೆ ಯಾವುದೇ ಲಾಭ ಸಿಗುತ್ತಿಲ್ಲ. ಸಾಮಾನ್ಯವಾಗಿ ಗುಲಬರ್ಗಾ ಪ್ರದೇಶವು ಕಪ್ಪು ಮಣ್ಣಿನಿಂದ ಕೂಡಿದ್ದು ಅತ್ಯಂತ ಫಲವತ್ತಾಗಿದೆ. ಇಲ್ಲಿ ಪ್ರಮುಖವಾಗಿ ತೊಗರಿ ಬೆಳೆ, ಜೋಳ, ಸಜ್ಜೆ, ಗೋಧಿ, ಎಳ್ಳು, ಸೂರ್ಯಕಾಂತಿ, ಹತ್ತಿ, ಕಡಲೆ, ಮುಂತಾದ ಬೆಳೆಗಳನ್ನು ಬೆಳೆಯಲಾಗುತ್ತದೆ. ತೊಗರಿ ಬೆಳೆಯು ಈ ಭಾಗದ ಪ್ರಮುಖ ವಾಣಿಜ್ಯ ಬೆಳೆಯಾಗಿದ್ದು ಹೆಚ್ಚಿನ ಪ್ರಮಾಣದಲ್ಲಿ ತೊಗರಿಯನ್ನು ಬೆಳೆಯುವುದರಿಂದ ಗುಲಬರ್ಗಾ ಜಿಲ್ಲೆಯನ್ನು "ತೊಗರಿ ಕಣಜ"ವೆಂದು ಕರೆಯುತ್ತಾರೆ. ಇದು ಪ್ರಸ್ತುತ ಕಾಲದಲ್ಲಿ ಹೆಚ್ಚಿನ ಬೆಲೆ ಮತ್ತು ಬೇಡಿಕೆಯನ್ನು ಹೊಂದಿದೆ. ಈ ಭಾಗವು ಬಯಲು ಪ್ರದೇಶದಿಂದ ಕೂಡಿದ್ದು ಒಣ ಬೇಸಾಯವನ್ನು ಹೊಂದಿದೆ. ಪ್ರಮುಖ ನದಿಗಳಾದ ಭೀಮಾ, ಕೃಷ್ಣಾ ನದಿಗಳು ಈ ಭಾಗದಲ್ಲಿ ಹರಿದರೂ ಯಾವುದೇ ಪ್ರಯೋಜನವಿಲ್ಲದ್ದಾಗಿದೆ. ಸರಕಾರ ಇದರ ಬಗ್ಗೆ ಗಮನಹರಿಸಿ ಗುಲಬರ್ಗಾ ರೈತರಿಗೆ ನೀರಾವರಿ ಸೌಲಭ್ಯ ಒದಗಿಸಿಕೊಟ್ಟರೆ, ಈ ಪ್ರದೇಶವು ರಾಜ್ಯದ ಪ್ರಮುಖ ವಾಣಿಜ್ಯ ವ್ಯವಹಾರ ಹಾಗೂ ಮುಂದುವರೆದ ಜಿಲ್ಲೆಯಾಗಿ ಬೆಳೆಯುವುದರಲ್ಲಿ ಸಂಶಯವಿಲ್ಲ. ಕೇವಲ ಮಳೆಯನ್ನೇ ಅವಲಂಬಿಸಿರುವ ಇಲ್ಲಿನ ರೈತ ಸಮೂಹದ ಜನತೆ ಬದುಕುವ ಸ್ಥಿತಿ ಚಿಂತಾಜನಕವಾಗಿದೆ. ಈ ಪ್ರದೇಶದಲ್ಲಿ ಆಗಾಗ ಬರಗಾಲ ತಲೆದೊರುತ್ತಿದ್ದು, ಜನತೆಯನ್ನು ಅದರಲ್ಲಿ ಮುಖ್ಯವಾಗಿ ರೈತರನ್ನು ತಲ್ಲಣಗೊಳಿಸಿದೆ. ಬೆಳೆದ ಬೆಳೆಗೆ ಸರಿಯಾದ ಬೆಲೆ ಸಿಗದ ರೈತರು ಕಂಗೆಡುವ ಸ್ಥಿತಿಯನ್ನು ಎದುರಿಸುತ್ತಿದ್ದಾರೆ. ಈ ಹಿನ್ನೆಲೆಯಲ್ಲಿ ಸರಕಾರ ಜಿಲ್ಲೆಗೆ ಗಮನಹರಿಸಿ ಅನೇಕ ಅಭಿವೃದ್ಧಿ ಕಾರ್ಯಗಳನ್ನು ಕೈಗೊಂಡು ಪ್ರಗತಿಯತ್ತಾ ಮುನ್ನಡೆಯಲು ಅನುವು ಮಾಡಿದರೆ ಕರ್ನಾಟಕದ ಪ್ರಮುಖ ಜಿಲ್ಲೆಗಳಲ್ಲಿ ಒಂದಾಗುವುದರಲ್ಲಿ ಸಂಶಯವಿಲ್ಲ ಎಂದು ಹೇಳಬಹುದು.

**ಐತಿಹಾಸಿಕ ಹಿನ್ನೆಲೆ**

ಗುಲಬರ್ಗಾ ಜಿಲ್ಲೆಯು ಐತಿಹಾಸಿಕವಾಗಿ ಬಹಳಷ್ಟು ಪ್ರಾಮುಖ್ಯತೆಯನ್ನು ಹೊಂದಿದೆ. ಇದು ಪ್ರಾಚೀನ ಕಾಲದಿಂದಲೂ ಚಾರಿತ್ರಿಕವಾಗಿ ಹಲವಾರು ದಾಖಲೆಗಳನ್ನು ಸೃಷ್ಟಿಸುತ್ತಾ ಬಂದಿದೆ. ಭೌಗೋಳಿಕವಾಗಿ ದಖ್ಖನ್ ಪ್ರಸ್ತಭೂಮಿಯಲ್ಲಿರುವ ಕರ್ನಾಟಕದ ಉತ್ತರ ಭಾಗದ ಗುಲಬರ್ಗಾ ಜಿಲ್ಲೆಯು ಮಹಾರಾಷ್ಟ್ರ ಹಾಗೂ ಆಂಧ್ರ ಪ್ರದೇಶಗಳ ಗಡಿಯಂಚಿಗೆ ಹೊಂದಿಕೊಂಡಿದೆ. ಬೀದರ್, ಗುಲಬರ್ಗಾ, ರಾಯಚೂರು, ಬಳ್ಳಾರಿ ಮತ್ತು ಕೊಪ್ಪಳ ಜಿಲ್ಲೆಗಳನ್ನೊಳಗೊಂಡ ವಿಭಾಗಿಯ

ಕೇಂದ್ರಸ್ಥಾನವಾಗಿರುವ ಈ ಜಿಲ್ಲೆಯು ಸುದೀರ್ಘವಾದ ಐತಿಹಾಸಿಕ ಹಿನ್ನೆಲೆಯನ್ನು ಹಾಗೂ ಪರಂಪರೆಯನ್ನು ಹೊಂದಿದೆ. ಕರ್ನಾಟಕ ಇತಿಹಾಸದುದ್ದಕ್ಕೂ ಪ್ರಮುಖ ಪಾತ್ರವಹಿಸಿರುವ ಈ ಜಿಲ್ಲೆಯನ್ನು ಮೌರ್ಯರು, ಶಾತವಾಹನರು, ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣದ ಚಾಲುಕ್ಯರು, ಕಳಚೂರಿಗಳು, ಬಹಮನಿ ಹಾಗೂ ವಿಜಾಪುರದ ಆದಿಲ್‌ಷಾಹಿಗಳು ಸತತವಾಗಿ ಆಳ್ವಿಕೆ ಮಾಡಿರುತ್ತಾರೆ. ರಾಷ್ಟ್ರಕೂಟರು ಗುಲಬರ್ಗಾ ಸಮೀಪದಲ್ಲಿರುವ ಮಳಖೇಡವನ್ನು ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡಿದ್ದರು. ಅನಂತರ ಕರ್ನಾಟಕವನ್ನು ಆಳಿದ ಚಾಲುಕ್ಯ ಮೂರನೇ ಸೋಮೇಶ್ವರನು ಆಗ ಇದೇ ಪ್ರಾದೇಶಿಕ ವ್ಯಾಪ್ತಿಯಲ್ಲಿದ್ದ ಕಲ್ಯಾಣವನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡನು. ಬಹಮನಿಷಾಹಿಗಳ ಆಳ್ವಿಕೆಯ ಸಂಸ್ಥಾಪಕನಾದ ಅಲ್ಲಾವುದ್ದೀನ್ ಬಹಮನಿ ಷಾ ಗುಲಬರ್ಗಾ ನಗರವನ್ನೇ ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡಿದ್ದನು. ಬಹುಮನಿಷಾಹಿಗಳು ಗುಲಬರ್ಗಾದಿಂದ ೧೩೪೭ರಿಂದ ೧೪೨೪ರ ವರೆಗೆ ಪ್ರಬಲವಾಗಿ ಆಳ್ವಿಕೆ ಮಾಡಿದರು. ನಂತರ ಅಹಮದ್ ಷಾವಲಿ (೧೪೨೨-೧೪೩೬)ಯ ಆಡಳಿತಾವಧಿಯಲ್ಲಿ ಬಹಮನಿಷಾಹಿಗಳು ತಮ್ಮ ರಾಜಧಾನಿಯನ್ನು ಗುಲಬರ್ಗಾದಿಂದ ಬೀದರ್‌ಗೆ ವರ್ಗಾಯಿಸಿದರು. ಈ ಸಾಮ್ರಾಜ್ಯವು ದಖ್ಖನ್ ಪ್ರಸ್ಥಭೂಮಿಯ ಕೃಷ್ಣಾನದಿಯಿಂದ ತಪತಿ ನದಿಯವರೆಗೂ ವ್ಯಾಪಿಸಿತ್ತು. ಇವರ ದೀರ್ಘ ಆಳ್ವಿಕೆಯ ಅವಧಿಯಲ್ಲಿ ಅವರು ಮಾಡಿದ ಸಾಂಸ್ಕೃತಿಕ ಸಾಧನೆಗಳು ಇತಿಹಾಸದಲ್ಲಿ ಅವಿಸ್ಮರಣೀಯವಾಗಿವೆ. ಬಹಮನಿಷಾಹಿಗಳ ಆಳ್ವಿಕೆ ಅವನತಿಗೊಂಡ ಮೇಲೆ ಈ ಭಾಗವು ಹೈದರಬಾದ ನಿಜಾಮರ ಸಂಸ್ಥಾನವಾಗಿ ಮುಂದುವರೆದು, ನಂತರ ಅಪರೋಕ್ಷವಾಗಿ ಬ್ರಿಟಿಷರ ಹತೋಟಿಯಲ್ಲಿ ಮುಂದುವರೆಯಿತು. ಇದು ಪ್ರಾದೇಶಿಕವಾಗಿ ಇದರ ಚರಿತ್ರೆಯು ಬಹಳಷ್ಟು ಮಹತ್ವದಿಂದ ಕೂಡಿದೆ.

### ಪೌರಾಣಿಕ ಹಿನ್ನೆಲೆ

ಪುರಾಣ, ಕಥೆಗಳಲ್ಲಿ ಈ ಪ್ರದೇಶದ ಚರಿತ್ರೆಯನ್ನು ಕಾಣುತ್ತವೆ. ಈ ಹಿನ್ನೆಲೆಯುಳ್ಳ ಅನೇಕ ಸ್ಥಳಗಳಿದ್ದು ಕೆಲವು ಪವಿತ್ರ ಕ್ಷೇತ್ರಗಳೆಂದು ಜನಪ್ರಿಯವಾಗಿವೆ. ಶಹಾಪೂರ, ಸುರಪುರ ಹಾಗೂ ಜೇವರ್ಗಿ ತಾಲೂಕುಗಳ ಗಡಿಯಂತಿರುವ ಕೃಷ್ಣಾ-ಭೀಮೆಯರ ನಡುವೆ ವ್ಯಾಪಿಸಿರುವ ಪ್ರದೇಶವು ಹಲವಾರು ರೀತಿಯ ಪೌರಾಣಿಕಥೆಯನ್ನು ಹೊಂದಿದ ಹಾಗೂ ವಿಜಾಪುರ ಜಿಲ್ಲೆಯ ಮುದ್ದೇಬಿಹಾಳ ಹಾಗೂ ಸಿಂಧಗಿ ತಾಲೂಕಿನವರೆಗಿನ ವ್ಯಾಪ್ತಿಯುಳ್ಳ ಭಾಗವನ್ನು "ಸಗರನಾಡು" ಎಂದು ಕರೆಯಲಾಗುತ್ತದೆ. ಈ ಪ್ರದೇಶವನ್ನು ಸಗರ ಚಕ್ರವರ್ತಿ ಸಗರನಾಡನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡಿದ್ದಾನೆಂದು ಪ್ರತೀತಿ ಇದೆ. ಪೌರಾಣಿಕ ಕಥೆಯ ಪ್ರಕಾರ ಯುದ್ಧದಲ್ಲಿ ಬಾಹುಕನು ಮರಣ ಹೊಂದಿದನು. ಆ ನಂತರ ಅವನ ಪತ್ನಿಯು ಒರ್ವ ಮಹರ್ಷಿಯ ಸಂಬಂಧದಿಂದ ಗರ್ಭವತಿಯಾದಳು, ಆಕೆಯ ಸವತಿಯರು ಅಸೂಯೆಯಿಂದ ಆಕೆಗೆ ತಿಳಿಯದ ಹಾಗೆ ಅನ್ನದಲ್ಲಿ ವಿಷ ಉಣಿಸಿ ಭ್ರೂಣವನ್ನು ನಾಶ ಮಾಡಲು ಪ್ರಯತ್ನಿಸಿದಾಗ್ಯೂ ಗರ್ಭದ ಮೇಲೆ ಈ ವಿಷವು ಯಾವ ಪ್ರಭಾವ ಬೀರದೆ ಗರ(ವಿಷ)ವನ್ನು ಮೈತಳೆದು ಜನಿಸಿದ ಮಗುವೇ "ಸಗರ"ನೆಂಬ ಹೆಸರನ್ನು ಗಳಿಸಿದನು. ಈತನೇ ಮುಂದೇ ಯಶಸ್ವೀ ಸಾಮ್ರಾಟನಾಗಿ

"ಸಗರ ಚಕ್ರವರ್ತಿ" ಎನಿಸಿಕೊಂಡನು.[೬] ಸಗರನಾಡನಲ್ಲಿ ಯಶಸ್ವಿಯಾಗಿ ಆಳ್ವಿಕೆ ಮಾಡಿದನೆಂಬ ನಂಬಿಕೆಯಿಂದ ಪೌರಾಣಿಕ ಹಿನ್ನೆಲೆಯನ್ನು ಪಡೆದಿದ್ದನು. ಹೀಗೆ ಈ ಪ್ರದೇಶದಲ್ಲಿ ಇಂಥ ಪೌರಾಣಿಕ ಕಥೆಗಳು ಇಲ್ಲಿ ಕಂಡುಬರುತ್ತದೆ.

## ಇತಿಹಾಸ ಪೂರ್ವ ಕಾಲ

ಲಿಖಿತ ದಾಖಲೆಗಳು ಇಲ್ಲದ ಕಾಲದ ಇತಿಹಾಸವನ್ನು ಇತಿಹಾಸ ಪೂರ್ವ ಕಾಲ ಅಥವಾ ಪ್ರಾಗೈತಿಹಾಸಿಕ ಕಾಲ (ಪ್ರಿ-ಹಿಸ್ಟಾರಿಕ್ ಪೀರ್‍ಯಡ್) ಎನ್ನುತ್ತಾರೆ. ವಾಸದ ನಿವೇಶನಗಳು, ಮಡಿಕೆ, ಕುಡಿಕೆಗಳು, ಎಲುಬುಗಳು, ಕಲ್ಲಿನ ಆಯುಧಗಳು ಮುಂತಾದ ಅವಶೇಷಗಳ ನೆರವಿನಿಂದಷ್ಟೇ ಈ ಕಾಲದ ಇತಿಹಾಸ ರಚನೆ ಆಗಬೇಕು, ಗುಲ್ಬರ್ಗಾ ಜಿಲ್ಲೆಯ ಹುಣಸಿಗಿ ಇವು ಆದಿ ಶಿಲಾಯುಗದ ಕೆಲವು ನಿವೇಶನಗಳು ಇಲ್ಲಿ ದೊರೆತ ಶಿಲಾಯುಗಳಲ್ಲಿ ಹೆಚ್ಚಿನವು ಕೊಡಲಿಗಳು ಮತ್ತು ಸೀಳು ಸಾಧನೆಗಳು ಆದರೆ ಅವು ಚಪ್ಪಟೆಯಾಗಿರದೆ ಉಂಡೆಕಲ್ಲಿನಂತೆ ಇವೆ.[೭]

ಗುಲಬರ್ಗಾ ಜಿಲ್ಲೆಯು ನೈಸರ್ಗಿಕವಾಗಿ ಸಂಪತ್ಭರಿತವಾಗಿದೆ. ಇಲ್ಲಿ ಭೀಮಾ ನದಿಯ ವಾಯುವ್ಯ ಆಗ್ನೆಯ ದಿಕ್ಕಿನಲ್ಲಿ ಹರಿಯುತ್ತಿದೆ. ಇಲ್ಲಿ ೧೯ನೇ ಶತಮಾನ ಉತ್ತಾರಾರ್ಧ ದಶಕಗಳಲ್ಲಿ ರಾಬರ್ಟ್‌ಬ್ರೂಸ್ ಫೊಟ್ ಎಂಬ ಭೂ ವಿಜ್ಞಾನಿಯು ಸುರಪುರ ತಾಲೂಕಿನ ಕೃಷ್ಣಾ ನದಿಯ ದಂಡೆಯ ಮೇಲೆ ಇರುವ ಯಡಹಳ್ಳಿಯಲ್ಲಿ ಆದಿ ಶಿಲಾಯುಗದ ಕಲ್ಲಿನ ಕೊಡಲಿಗಳನ್ನು ಪತ್ತೆ ಹಚ್ಚಿದನು. ಹುಣಸಗಿಯಲ್ಲಿ ಆದಿ, ಹಳೇ ಶಿಲಾಯುಗದ ಐದು ನೆಲೆಗಳು ಈವರೆಗೆ ಪತ್ತೆಯಾಗಿವೆ. ಹುಣಸಗಿಯಲ್ಲಿಯ ನೆಲೆಗಳು ಎಲ್ಲವೂ ಮೂಲ ನೆಲೆಗಳಾಗಿವೆ. ಆದ್ದರಿಂದ ಇಡೀ ಭಾರತದಲ್ಲಿರುವ ಇಂಥ ಕೆಲವೇ ನೆಲೆಗಳಲ್ಲಿ ಇವು ಅತ್ಯಂತ ಮಹತ್ವದ್ದಾಗಿವೆ.[೮] ಈ ಪ್ರದೇಶದಲ್ಲಿ ದೊರೆತ ಪ್ರಾಣಿಗಳ ಎಲುಬುಗಳ ಪಳೆಯುಳಿಕೆಗಳು ದೊರೆತಿವೆ. ಪ್ರಾಗೈತಿಹಾಸದ ಮಾನವನು ಗೂಳಿ, ಎಮ್ಮೆ, ಮೊದಲಾದ ಪ್ರಾಣಿಗಳನ್ನು ತನ್ನ ಆಹಾರಕ್ಕೋಸ್ಕರ ಬೇಟೆಯಾಡುತ್ತಿದ್ದ ಬಗ್ಗೆ ಕುರುಹುಗಳಿವೆ. ಕೃಷ್ಣಾ ಸೇತುವೆಯ ಬಳಿ, ಮಳಖೇಡ ಹಾಗೂ ಇತರ ನೆಲೆಗಳಲ್ಲಿ ಮಧ್ಯಹಳೆ ಶಿಲಾಯುಗದ ಜನರ ಕಲ್ಲಿನ ಉಪಕರಣಗಳು ಮಾತ್ರ ದೊರೆತಿವೆ. ಕೊಡೆಕಲ್ ಮತ್ತು ಬೂದಿಹಾಳ ನಿವೇಶನಗಳ ಉತ್ಖನನಗಳಿಂದ ನೂತನ ಶಿಲಾಯುಗದ ಜೀವನ ಶೈಲಿಯ ಬಗೆಗೆ ಕೆಲವೊಂದು ಸಾಮಾನ್ಯ ಅಂಶಗಳು ತಿಳಿಯುತ್ತವೆ. ಜೇವರ್ಗಿ, ಆಂದೋಲ, ರಾಜನಕೋಳೂರು, ಹಗರಟಗಿಗಳಲ್ಲಿಯ ಕಬ್ಬಿಣ ಯುಗದ ಬೃಹತ್ ಶಿಲಾ ಸಂಸ್ಕೃತಿಯ ಕೆಲವೊಂದು ಕಲ್ಗೋರಿಗಳನ್ನು ಮೆಡೋಸ್ ಟೇಲರ್ ಬೆಳಕಿಗೆ ತಂದಿದ್ದಾನೆ. ಇಂಥ ಕಲ್ಗೋರಿಗಳ ನೆಲೆಗಳು ದಕ್ಷಿಣ ಭಾರತದಲೆಲ್ಲಾ ೨೦೦೦ಕ್ಕೂ ಹೆಚ್ಚು ಶೋಧನೆಯಾಗಿವೆ. ಬಲ್ಲೆ, ಕತ್ತಿ, ತ್ರಿಶೂಲ ಮೊದಲಾದ ಶಸ್ತ್ರಗಳು, ಕಬ್ಬಿಣದ ನಾಲಗೆಯುಳ್ಳ ಕಂಚಿನ ಸಣ್ಣ ಸಣ್ಣ ಗಂಟೆಗಳು, ಹಿಡಿಕೆಯುಳ್ಳ ಬಾದಾಮಿ ಆಕಾರದ ಹಣತೆಗಳು, ಸಣ್ಣಸಣ್ಣ ತಟ್ಟೆಗಳು ಮೊದಲಾದವುಗಳು ಇವೆ. ಗುಲಬರ್ಗಾ ಜಿಲ್ಲೆಯ ಬಳಿಚಕ್ರ ಎಂಬಲ್ಲಿ ಕುದುರೆ ಸವಾರನ ಚಿತ್ರವಿದೆ. ಈ ಚಿತ್ರಗಳ ಸಮೀಪದಲ್ಲಿ ನೂರಾರು ಕೋಣೆ ಗೋರಿಗಳಿವೆ ಮತ್ತು ವಸತಿ ನೆಲೆಯು ಇದೆ. ಈ ಜನರ ವಿಶಿಷ್ಟತೆಯೆಂದರೆ ಇವರ ಶವ ಸಂಸ್ಕಾರಕ್ಕೋಸ್ಕರ ಕಟ್ಟುತ್ತಿದ್ದ ಕೋಣೆ ಗೋರಿಗಳು.[೯]

## ಮೌರ್ಯರು ಮತ್ತು ಶಾತವಾಹನರ ಕಾಲದ ಇತಿಹಾಸ

ಮೌರ್ಯರು ಗುಲಬರ್ಗಾದಲ್ಲಿ ಆಳ್ವಿಕೆ ಮಾಡಿದ್ದು, ಸನ್ನತಿಯಲ್ಲಿ ಅಶೋಕನ ಸಾಮ್ರಾಜ್ಯದ ಕುರುಹುಗಳಿವೆ. ಇದು ದಕ್ಷಿಣ ಭಾಗದಲ್ಲಿ ಒಂದು ಪ್ರಮುಖ ಪಟ್ಟಣವಾಗಿದ್ದಿತ್ತೆಂಬುದರಲ್ಲಿ ಸಂಶಯವಿಲ್ಲ. ಅಷ್ಟೇ ಅಲ್ಲ ಪ್ರಮುಖ ಆಡಳಿತ ಕೇಂದ್ರವೂ ಆಗಿದ್ದಿರಬೇಕು. ಉತ್ತರ ಕರ್ನಾಟಕವೂ ಮೌರ್ಯ ಸಾಮ್ರಾಜ್ಯದ ಭಾಗವಾಗಿದ್ದರೂ ಕೂಡ ಕಾಲದ್ದೆಂದ್ದು ಖಚಿತವಾಗಿ ಹೇಳಬಹುದು. ಯಾವುದೇ ಪ್ರಕಾರದ ಶಾಸನಗಳು ಹೊರತಾಗಿ, ವಸ್ತು ಅವಶೇಷಗಳು ದೊರೆತಿರಲಿಲ್ಲ. ಆದ್ದರಿಂದ ಸನ್ನತಿಯಲ್ಲಿ ದೊರೆತ ಮೌರ್ಯಕಾಲದ ಪ್ರಮಾಣಗಳ ಅತ್ಯಂತ ಮಹತ್ವದ್ದು, ಪ್ರಾಯಶಃ ಸನ್ನತಿಯಲ್ಲಿ ಮೌರ್ಯ ಸಾಮ್ರಾಜ್ಯದ ಒಬ್ಬ ಉನ್ನತ ಆಡಳಿತಾಧಿಕಾರಿ ಇದ್ದಿರಬೇಕೆಂದು ಕಾಣುತ್ತದೆ ಮತ್ತು ಆ ಕಾಲದಿಂದ ಈ ಪ್ರದೇಶದಲ್ಲಿ ಬೌದ್ಧ ಧರ್ಮ ಪ್ರಚಾರವಾಗಿದ್ದಿರಬಹುದು. ಇಂಥ ಅಂಶಗಳಿಂದ ನೋಡಿದಾಗ ಇಲ್ಲಿ ಮೌರ್ಯರರ ಆಳ್ವಿಕೆಗೆ ಗುಲಬರ್ಗಾದ ಪ್ರದೇಶಗಳನ್ನು ಒಳಗೊಂಡಿದೆ ಎಂದು ಹೇಳಬಹುದು.

ಶುಂಗರ ಮತ್ತು ಕಣರ ರಾಜ್ಯ ಭಾರವನ್ನು ಮುಕ್ತಾಯಗೊಳಿದವನು ದಕ್ಷಿಣ ಆಂಧ್ರ ಅರಸನೊಬ್ಬನೆಂದು ಪುರಾಣಗಳು ಹೇಳುತ್ತವೆ. ಗೋದಾವರಿ ಮತ್ತು ಕೃಷ್ಣಾ ನದಿಗಳ ಮುಖಜ ಭೂಮಿಯ ಪ್ರದೇಶದಲ್ಲಿರುವ ತೆಲುಗು ಭಾಷೆಯನ್ನಾಡುವ ಜನರಿಗೆ ಆಂಧ್ರರು ಎಂಬ ಹೆಸರು ರೂಢಿಯಲ್ಲಿದೆ. ಸಮಕಾಲದ ಶಾಸನಗಳಲ್ಲಿ ಈ ಅರಸನ ಸಂತತಿಯವರನ್ನು ಶಾತವಾಹನರೆಂದು ಕರೆಯಲಾಗಿದೆ. ಹಾಗೂ ಶಾತವಾಹನ ಜಿಲ್ಲೆಯೊಂದು ಕರ್ನಾಟಕ ಪ್ರದೇಶದ ಬಳ್ಳಾರಿ ಜಿಲ್ಲೆಯ ನೆರೆಯಲ್ಲಿದ್ದಿತೆಂದು ದೃಢಪಡಿಸಲಾಗಿದೆ. ಕರ್ನಾಟಕ ಪ್ರದೇಶದ ಬಳ್ಳಾರಿ ಜಿಲ್ಲೆಯ ನೆರೆಯಲ್ಲದಿತೆಂದು ದೃಢ ಪಡಿಸಲಾಗಿದೆ. ಭಾರತೀಯ ಐತಿಹ್ಯದಲ್ಲಿ ಪ್ರಸಿದ್ಧನಾದ ಶಾಲಿವಾಹನ ಖ್ಯಾತಿವೆತ್ತ ಸಹಸಗಳಿಂದ ಈ ಸಂತತಿಯ ಹೆಸರು ಚಿರಸ್ಮರಣಿಯವಾಗಿದೆ.[೧೦]

ಗುಲಬರ್ಗಾದ ಸನ್ನತಿಯಲ್ಲಿ ಶಾತವಾಹನರ ಕಾಲದ ಅವಶೇಷಗಳು ತುಂಬಾ ಇವೆ. ಇಟ್ಟಿಗೆ ರಕ್ಷಣಾಗೋಡೆ ಇವೆ. ಮೌರ್ಯರ ಕಾಲದಲ್ಲಿ ಆರಂಭವಾಗಿ ಶಾತವಾಹನ ಕಾಲದಲ್ಲಿ ವಿಸ್ತಾರವಾಯಿತೆಂದು ಕಾಣುತ್ತದೆ. ಇಲ್ಲಿನ ಶಾಸನಗಳಲ್ಲಿ ನಾಲ್ಕು ನೇರವಾಗಿ ಶಾತವಾಹನ ಅರಸರಿಗೆ ಸಂಬಂಧಪಟ್ಟವು. ಈ ಅರಸು ಮನೆತನದಲ್ಲಿ ಪ್ರಸಿದ್ಧರಾದ ಗೌತಮಿಪುತ್ರ ಶಾತಕರ್ಣಿ ಮತ್ತು ವಶಿಷ್ಠ ಪುತ್ರ ಪುಳುಮಾಯಿ ಇವರನ್ನು ಉಲ್ಲೇಖಿಸುತ್ತವೆ. ಬಹುಶಃ ಈ ಪ್ರದೇಶವು ನೇರವಾಗಿ ಅವರ ಆಡಳಿತಕ್ಕೆ ಒಳಪಟ್ಟಿತೆಂದು ಕಾಣುತ್ತದೆ. ಇಡೀ ಕರ್ನಾಟಕದಲ್ಲಿಯೇ ಶಾತವಾಹನ ಕಲೆ ಅದರಲ್ಲೂ ವಿಶೇಷವಾಗಿ ಬೌದ್ಧ ಪಂಥ ಕಲೆಗೆ ಅತೀ ಮಹತ್ವದ ಏಕೈಕ ಸ್ಥಳವೆಂದರೆ ಗುಲಬರ್ಗಾ ಪ್ರದೇಶ 'ಸನ್ನತಿ' ಹೀಗೆ ಹಲವಾರು ಅವಶೇಷಗಳು ಶಾತವಾನರ ಕಾಲಕ್ಕೆ ಸಂಬಂಧಪಟ್ಟ ವಸ್ತುಗಳಲ್ಲಿ ಇಲ್ಲಿ ದೊರೆತಿರುವುದರಿಂದ ಈ ಪ್ರದೇಶವು ಶಾತವಾಹನರ ಆಡಳಿತಕ್ಕೆ ಒಳಪಟ್ಟಿದೆ ಎಂದು ಹೇಳಬಹುದು.

## ಬಾದಾಮಿ ಚಾಲುಕ್ಯರ ಇತಿಹಾಸ

ಕರ್ನಾಟಕವನ್ನಾಳಿದ ಪ್ರಮುಖ ಅರಸು ಮನೆತನಗಳಲ್ಲಿ ಬಾದಾಮಿ ಚಾಲುಕ್ಯರ ಮನೆತನವು ಸಹ ಪ್ರಮುಖವಾಗಿದೆ. ಪ್ರಸಿದ್ಧವಾದ ಚಾಲುಕ್ಯರ ಮನೆತನವು ಸಹ ಪ್ರಮುಖವಾಗಿದೆ. ಪ್ರಸಿದ್ಧವಾದ ಚಾಲುಕ್ಯರ ಮನೆತನವು ಕದಂಬರ ಪತನವಾದ ಮೇಲೆ ಬಾದಾಮಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡರು. ಇವರು ಕ್ರಿ.ಶ. ೫೪೦ರಿಂದ ೭೫೩ವರೆಗೆ ಸುಮಾರು ೨೫೦ ವರ್ಷಗಳವರೆಗೆ ಕರ್ನಾಟಕವನ್ನು ಆಳ್ವಿಕೆ ಮಾಡದರು. ಈ ಸಾಮ್ರಾಜ್ಯವು ಕರ್ನಾಟಕದಲ್ಲಿ ಅಷ್ಟೇ ಅಲ್ಲದೆ ದಕ್ಷಿಣ ಭಾರತದ ಚರಿತ್ರೆಯಲ್ಲಿ ವಿಶೇಷ ಮಹತ್ವದಿಂದ ಕೂಡಿದೆ. ಬಾದಾಮಿ ಚಾಲುಕ್ಯರ ಸಾಮ್ರಾಜ್ಯವು ಉತ್ತರದಲ್ಲಿ ನರ್ಮದಾ ನದಿಯ ತೀರದಿಂದ ದಕ್ಷಿಣದಲ್ಲಿ ತುಂಗಭದ್ರ ನದಿಯವರೆಗೂ ಹರಡಿತು.[೧೦]

ವಾತಾಪಿ ಅಥವಾ ಬಾದಾಮಿಯನ್ನು ರಾಜಧಾನಿಯನ್ನಾಗಿ ಹೊಂದಿದ್ದ ಚಾಲುಕ್ಯರ ಮೂಲದ ಬಗ್ಗೆ ಶಾಸನಗಳು ದೊರೆತಿಲ್ಲ. ಆದರೆ ವೆಂಗಿಯ ಪೂರ್ವ ಚಾಲುಕ್ಯರು ಹಾಗೂ ಕಲ್ಯಾಣದ ಪಶ್ಚಿಮ ಚಾಲುಕ್ಯರ ೧೧-೧೨ನೇ ಶತಮಾನದ ಶಾಸನಗಳಲ್ಲಿ ಈ ಮನೆತನದ ಮೂಲದ ವಿಷಯವಾಗಿ ಕೆಲವು ಕತೆಗಳು ಕಂಡು ಬರುತ್ತವೆ. ಕಲ್ಯಾಣದ ಚಾಲುಕ್ಯರ ಶಾಸನಗಳಲ್ಲಿ ಈ ಹೆಸರಿಗೆ ಸಂಬಂಧಿಸಿದಂತೆ ಶಾಸನಗಳಲ್ಲಿ ಚಾಲುಕ್ಯ, ಚಲಿಕ, ಚಾಲಿಕ್ಯ, ಚಲಕ್ಯ ಮೊದಲಾದ ಪದಗಳು ಕಂಡುಬರುತ್ತವೆ, ಹಾಗೆ ಬಿಲ್ಹಣನ ವಿಕ್ರಮಾಂಕದೇವ ಚರಿತಂ ಎಂಬ ಕೃತಿಗಳಿಂದ ತಿಳಿಯುವಂತೆ, "ಚಾಲುಕ್ಯ" ಎಂಬ ಹೆಸರು ಬಂದದ್ದು "ಚುಲುಕ" ಎಂಬುದರಿಂದ ಅದಕ್ಕೆ ಅಂಗೈಯ ಹಳ್ಳಿ ಎಂದು ಅರ್ಥ. ಸಂಧ್ಯೋಪಾಸನೆ ಮಾಡುತ್ತಿದ್ದಾಗ, ಭೂಮಿಯಲ್ಲಿ ಒಂದೇ ಸಮನೆ ಕೆಡಕು ಹೆಚ್ಚುತ್ತಿರುವುದರಿಂದ ಅದನ್ನು ಕೊನೆಗೊಳಿಸಲು ಒಬ್ಬ ವೀರನನ್ನು ಅನುಗ್ರಹಿಸಬೇಕೆಂದು ಇಂದ್ರ, ಬ್ರಹ್ಮನನ್ನು ಕೋರಿದನು. ಬ್ರಹ್ಮನು ತನ್ನ "ಚುಲುಕ" ಅಂದರೆ ಅಂಗೈಯನ್ನು ನೋಡಿದನು. ಅಲ್ಲಿಂದ ಒಬ್ಬ ಮಹಾಪರಾಕ್ರಮಿ ಚಾಲುಕ್ಯನು ಹುಟ್ಟಿ ಬಂದನು. ಅವನೆ ಚಾಲುಕ್ಯರ ಮೂಲಪುರುಷ.[೨]

ಬಾದಾಮಿ ಚಾಲುಕ್ಯರ ಆಳ್ವಿಕೆಯಲ್ಲಿ ಗುಲಬರ್ಗಾವು ಅಪರೋಕ್ಷವಾಗಿ ಆಳ್ವಿಕೆಗೆ ಒಳಪಟ್ಟಿತು. ಇವರ ಕಾಲದ ಶಾಸನಗಳಾಗಲ್ಲಿ ಅಥವಾ ಅವಶೇಷಗಳಾಗಲಿ ಲಭ್ಯವಾಗಿಲ್ಲ. ಗುಲಬರ್ಗಾದಿಂದ ವರದಿಯಾಗಿರುವ ಚಾಲುಕ್ಯ ವಿನಯಾದಿತ್ಯನ ಕಾಲದ ತಾಮ್ರ ಶಾಸನವು ಕೂಟ ಶಾಸನವಾಗಿರುವುದರಿಂದ ಅಗಣ್ಯವೆನಿಸುತ್ತದೆ. ನಿಂಬರಗಿಯ ೧೧೩೪ರ ಶಾಸನವು ಕಲ್ಯಾಣದ ಚಾಲುಕ್ಯ ಅರಸ ಮುಮ್ಮಡಿ ಸೋಮೇಶ್ವರನ ಕಾಲಕ್ಕೆ ಸೇರಿದ್ದು, ಬಾದಾವಿ ಚಾಲುಕ್ಯ ಅರಸನಾದ ವಿನಯಾದಿತ್ಯನಿಂದ ನಿಂಬರಗಿ ಗ್ರಾಮವನ್ನು ಊರೊಡೆಯ ಕಲಿದೇವನ ಪೂರ್ವಜನಾದ ನಾರಾಯಣಚಾರ್ಯನು ದತ್ತಿಯಾಗಿ ಪಡೆದಿದ್ದ ಬಗ್ಗೆ ತಿಳಿಸುತ್ತದೆ. ಬಾದಾಮಿ ಚಾಲುಕ್ಯರು ಭವ್ಯವಾದ ಸಾಮ್ರಾಜ್ಯವನ್ನು ನಿರ್ಮಿಸಿ ಸುಮಾರು ೯೦,೦೦೦ ಗ್ರಾಮಗಳುಳ್ಳ ಮೂರು ಮಹಾರಾಷ್ಟ್ರಕಗಳಿದ್ದುವೆಂದು ಐಹೊಳೆ ಶಾಸನ ತಿಳಿಸುತ್ತದೆ. ಗಂಗ, ಸೇಂದ್ರಕ, ಆಳುಪ, ಗುಜರಾತಿನ, ಬೋಧನದ ಮತ್ತು ವೆಂಗಿಯ ಚಾಲುಕ್ಯ ಕೊನೆಯವರು ಮುಂದೆ ಸ್ವತಂತ್ರವಾದರು

ವಿಷಯ, ಭೋಗ, ಗ್ರಾಮ ಮುಂತಾದ ಆಡಳಿತ ಘಟಕಗಳ ಉಲ್ಲೇಖಗಳು ಚಾಲುಕ್ಯರ ಶಾಸನಗಳಲ್ಲಿ ಕಂಡು ಬರುತ್ತವೆ.[೧೩] ದಕ್ಷಿಣ ಭಾರತ ವಾಸ್ತು ಶೈಲಿಯಲ್ಲಿ ಬಾದಾಮಿ ಚಾಲುಕ್ಯರ ಶೈಲಿಗೆ ಪ್ರತ್ಯೇಕ ಸ್ಥಾನವನ್ನು ನೀಡಲಾಗಿದೆ. ಇವರು ಮೂಲತಃ ವೈದಿಕ ಧರ್ಮವನ್ನು ಅವಲಂಬಿಸಿದ್ದರೂ ಜೈನ, ಬೌದ್ಧ, ಶೈವ ಹಾಗೂ ವೈಷ್ಣವ ಪಂಥಗಳಿಗೆ ಪ್ರತ್ಯೇಕ ಗುಹಾಲಯಗಳನ್ನು ಬಾದಾಮಿಯಲ್ಲಿ ನಿರ್ಮಿಸಿರುವುದು ಇವರ ಧಾರ್ಮಿಕ ಸಹಿಷ್ಣುತೆಗೆ ಉತ್ತಮ ನಿದರ್ಶನವಾಗಿದೆ.

## ಮಳಖೇಡದ ರಾಷ್ಟ್ರಕೂಟರ ಇತಿಹಾಸ

ಚಾಳುಕ್ಯರ ಪತನದ ನಂತರ ಗುಲಬರ್ಗಾ ಜಿಲ್ಲೆಯ ಚಿತ್ತಾಪುರ ತಾಲೂಕಿನ ಮಳಖೇಡವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಕ್ರಿ.ಶ. ೭೫೭ರಿಂದ ೯೭೩ರ ವರೆಗೆ ೨೧೬ ವರ್ಷಗಳ ಕಾಲ ರಾಜ್ಯಭಾರ ಮಾಡಿದ ರಾಷ್ಟ್ರಕೂಟರ ಕರ್ನಾಟಕದ ಕೀರ್ತಿಯನ್ನು ಉತ್ತರ ಭಾರತದಲ್ಲಿಯೂ ಸ್ಥಾಪಿಸಿದರು. ರಾಷ್ಟ್ರಕೂಟ ಎಂದರೆ ರಾಷ್ಟ್ರ ಎಂಬ ಆಡಳಿತ ವಿಭಾಗದ ಮುಖ್ಯಸ್ಥ ಪ್ರಾಚೀನ ಕರ್ನಾಟಕದಲ್ಲಿ ದೇಶಮುಖ, ದೇಸಾಯಿ, ಗ್ರಾಮಕೂಟ ಎಂಬ ಪದಗಳು ಅಸ್ತಿತ್ವದಲ್ಲಿದ್ದವು. ರಾಷ್ಟ್ರ ಎಂಬ ಪದವನ್ನು ಸಂಸ್ಕೃತದಲ್ಲಿ ರಾಷ್ಟ್ರೀಯ ಮತ್ತು ಪ್ರಾಕೃತದಲ್ಲಿ ರಥಿಕಾ ಎಂದು ಉಪಯೋಗಿಸುತ್ತಿದ್ದರು. ಮೌರ್ಯರ ಮತ್ತು ಶಾತವಾಹನರ ಶಾಸನಗಳಾಗಲಿ ಈ ಪದಗಳ ಉಲ್ಲೇಖ ಕಂಡುಬರುತ್ತವೆ. ಗರುಡ ಪಕ್ಷಿ ಇವರ ಲಾಂಛನವಾಗಿತ್ತು. ಹೀಗೆ ಮಳಖೇಡದವನು ಕೇಂದ್ರ ಆಡಳಿತವನ್ನಾಗಿ ಸುಮಾರು ೧೩ ಅರಸರು ಆಳ್ವಿಕೆ ಮಾಡಿದರು.[೧೪]

ಈ ವಂಶದ ಮೊದಲ ಅರಸನು ದಂತಿದುರ್ಗ (ಕ್ರಿ.ಶ. ೭೩೫-೭೫೬) ಇವನು ಎರಡನೇ ಇಂದ್ರನ ಮಗನಾದ ದಂತಿದುರ್ಗನ ರಾಷ್ಟ್ರಕೂಟ ವಂಶದ ಸಂಸ್ಥಾಪಕನಾಗಿ ಆಳ್ವಿಕೆ ಮಾಡಿದನು ಇವನ ನಂತರ ಒಂದನೇ ಕೃಷ್ಣ (ಕ್ರಿ.ಶ. ೭೫೬-೭೭೪) ಕೃಷ್ಣನು ದಂತಿದುರ್ಗನಿಗೆ ಸಾಮ್ರಾಜ್ಯವನ್ನು ಸ್ಥಾಪಿಸಲು ಸಹಕಾರ ನೀಡಿದ್ದಕ್ಕಾಗಿ ತನ್ನ ಉತ್ತಾರಧಿಕಾರಿಯಾಗಲು ಅನುಮತಿ ನೀಡಿದನು. ಇತನು ಹಲವಾರು ಬಿರುದುಗಳನ್ನು ಪಡೆದುಕೊಂಡಿದ್ದನು. ಕ್ರಿ.ಶ. ೭೫೮ರಲ್ಲಿ ಎಲ್ಲೋರಾದಲ್ಲಿ ಕೈಲಾಸನಾಥ ದೇವಾಲಯ ಮತ್ತು ಬಸದಿಗಳನ್ನು ನಿರ್ಮಿಸಿದನು. ಇತನ ನಂತರ ಎರಡನೇ ಗೋವಿಂದ (ಕ್ರಿ.ಶ. ೭೭೪-೭೮೦ರವರೆಗೆ) ಆಳ್ವಿಕೆ ಮಾಡಿದನು. ನಂತರ ಧ್ರುವ (ಕ್ರಿ.ಶ. ೭೮೦-೭೯೩) ಅಧಿಕಾರ ವಹಿಸಿಕೊಂಡ ಕೂಡಲೇ ಗಂಗರ ಸೈಗೊಟ್ಟ ಶಿವಮಾರನನ್ನು ಸೋಲಿಸಿ ಮಾಳಖೇಡದಲ್ಲಿ ಬಂಧನದಲ್ಲಿಟ್ಟನು. ಮಗನಾದ ಸ್ಥಂಭನನ್ನು ಈ ಪ್ರದೇಶದ ಪ್ರಾಂತಾಧಿಕಾರಿಯಾಗಿ ನೇಮಕ ಮಾಡಿದನು. ಹೀಗೆ ಆಳ್ವಿಕೆ ಮಾಡಿದ ಈತನ ತರುವಾಯ ಮೂರನೇ ಗೋವಿಂದ (ಕ್ರಿ.ಶ. ೭೯೩-೮೧೪ರವರೆಗೆ) ಆಡಳಿತ ನಡೆಸಿದನು. ಈತನ ನಂತರ ಮಳಖೇಡದ ಅರಸರಲ್ಲಿ ಅತ್ಯಂತ ಸುಪ್ರಸಿದ್ಧ ಹಾಗೂ ದಕ್ಷತೆಯಿಂದ ಆಳ್ವಿಕೆ ಮಾಡಿದವನು ಒಂದನೇ ಅಮೋಘವರ್ಷ (ನೃಪತುಂಗ) (ಕ್ರಿ.ಶ. ೮೧೪ರಿಂದ ೮೭೮ರವರೆಗೆ) ಆಳ್ವಿಕೆ ಮಾಡಿದನು.

## ಅಮೋಘವರ್ಷ ಕ್ರಿ.ಶ. ೮೧೪-೮೭೮

ಅಮೋಘವರ್ಷ ನೃಪತುಂಗನು ತನ್ನ ಆಸ್ಥಾನಕ್ಕೆ ವಿವಿಧ ಮತಗಳ ಪಂಡಿತರನ್ನು, ಕವಿಗಳನ್ನು, ಬರಮಾಡಿಕೊಂಡನು. ಈತನು ವಿದ್ಯಾ ಪಕ್ಷಪಾತಿಯೂ ಧಾರ್ಮಿಕ ಸಹಿಷ್ಣುವು ಆಗಿದ್ದನು. ಆರಬ್ ಪ್ರವಾಸಿ ಸುಲೇಮಾನನು ಅಮೋಘವರ್ಷನನ್ನು ಪ್ರಪಂಚದ ದೊಡ್ಡ ಸಾಮ್ರಾಟರೊಂದಿಗೆ, ಅಂದರೆ ಚೀನಾ, ಬಾಗ್ದಾದ್ ಮತ್ತು ಕಾನ್‌ಸ್ಟಾಂಟಿನೋಪಲ್ ರಾಜರುಗಳ ಸಹಪಂಥಿಯಲ್ಲಿ ಈತನನ್ನು ಹೋಲಿಸಿದ್ದಾನೆ. ಅಮೋಘವರ್ಷನು ತನ್ನ ರಾಜ್ಯಕ್ಕೆ ಧಾರುಣ ಸಾಂಕ್ರಾಮಿಕ ಹರಡಿದಾಗ ಅದರ ಪರಿಹಾರಾರ್ಥ ದೇವರಲ್ಲಿ ಮೊರೆಯಿಟ್ಟು ಕೊಲ್ಲಾಪುರದ ಮಹಾಲಕ್ಷ್ಮಿಗೆ ತನ್ನ ಬೆರಳನ್ನು ಮುಡುಪಾಗಿ ಅರ್ಪಿಸಿದನೆಂದು ಪ್ರತೀತಿಯಿಂದೆ. ಈತನ್ನೊಬ್ಬ ತತ್ವಜ್ಞಾನಿ ರಾಜನಾಗಿದ್ದನು. ಅಮೋಘವರ್ಷನು ಕ್ರಿ.ಶ. ೮೭೮ರಲ್ಲಿ ನಿಧನವಾದಾಗ ಅವನ ಮಗ ಇಮ್ಮಡಿ ಕೃಷ್ಣನು ಅಧಿಕಾರಕ್ಕೆ ಬಂದನು.

ಗುಲಬರ್ಗಾ ಜಿಲ್ಲೆಯಲ್ಲಿ ರಾಷ್ಟ್ರಕೂಟ ವಂಶದ ಮುಮ್ಮಡಿ ಕೃಷ್ಣನ ಕಾಲದ ಮೂರು ಶಾಸನಗಳು ಮಾತ್ರ ಕಾಣಸಿಗುತ್ತವೆ. ಶಹಾಪೂರ ತಾಲೂಕಿನ ಸಿರಿವಾಳದಲ್ಲಿ ದೊರೆತಿರುವ ಕ್ರಿ.ಶ.೯೩೯ರ ಅಕಾಲವರ್ಷ ಮುಮ್ಮಡಿ ಕೃಷ್ಣನ ಶಾಸನದಲ್ಲಿ ಸಗರನಾಡಿನ ಉಲ್ಲೇಖವಿದೆ.[೧೫] ಜೇವರ್ಗಿ ತಾಲೂಕಿನ ಆಂದೋಲಾದಲ್ಲಿರುವ ಕ್ರಿ.ಶ. ೯೫೮ರ ಶಾಸನದಲ್ಲಿ ಕನ್ನರ ದೇವ ಅಕಾಲವರ್ಷನು ಕೃಷ್ಣನು ನವಖಂಡ ಪೃಥ್ವಿಯನ್ನು ಆಳುತ್ತಿದ್ದನೆಂಬ ಉಲ್ಲೇಖವಿದೆ. ಮುಮ್ಮಡಿ ಕೃಷ್ಣನ ಕ್ರಿ.ಶ. ೯೫೮ ಮೂರನೆಯ ಶಾಸನವು ಚಿಂಚೋಳಿ ತಾಲೂಕಿನ ನಿಡುಗುಂದದಲ್ಲಿ ದೊರೆತಿದ್ದು ಅಸ್ಪಷ್ಟವಾಗಿದೆ. ರಾಷ್ಟ್ರಕೂಟರ ಆಡಳಿತದ ಬಗೆಗೆ ಬೇರೆಯಾವುದೇ ಶಾಸನಾಧಾರಗಳು ಈ ಜಿಲ್ಲೆಯಲ್ಲಿ ಲಭ್ಯವಿಲ್ಲವಾಗಿದೆ.

## ಕಲ್ಯಾಣದ ಚಾಳುಕ್ಯರ ಇತಿಹಾಸ

ಗುಲಬರ್ಗಾದಲ್ಲಿ ಕಲ್ಯಾಣದ ಚಾಳುಕ್ಯರ ಆಳ್ವಿಕೆ ಮಾಡಿರುವುದಕ್ಕೆ ಶಾಸನಗಳು ದೊರೆತಿವೆ. ಕಲ್ಯಾಣದ ಚಾಳುಕ್ಯರ ನೂರಾರು ಶಾಸನಗಳು ಗುಲಬರ್ಗಾ ಜಿಲ್ಲೆಯಲ್ಲಿ ದೊರೆತಿದ್ದು ಅವರ ಆಡಳಿತ ಪ್ರಭಾವವು ಜಿಲ್ಲೆಯಾದ್ಯಂತ ಕಂಡು ಬರುವುದು. ಚಾಳುಕ್ಯರ ಶಾಖೆಯ ಇಮ್ಮಡಿ ತೈಲನಿಂದ ರಾಷ್ಟ್ರಕೂಟರ ಇಮ್ಮಡಿ ಕರ್ಕನು ಸುಮಾರು ಕ್ರಿ.ಶ.೯೭೩ರಲ್ಲಿ ಪರಾಜಯಗೊಂಡ ನಂತರ ಒಂದು ಕಾಲದಲ್ಲಿ ಪ್ರಬಲರಾಗಿದ್ದ ರಾಷ್ಟ್ರಕೂಟ ಸಾಮ್ರಾಜ್ಯವು ಕ್ಷಣಿಸಿತು. ರಾಷ್ಟ್ರಕೂಟರ ಆಡಳಿತವನ್ನು ತೊರೆದು ಹಾಕಿದ ಎರಡನೇ ತೈಲನು ಕ್ರಿ.ಶ. ೯೭೩ರಲ್ಲಿ ಮಾನ್ಯಖೇಡದಲ್ಲಿ ಅಧಿಕಾರ ಗ್ರಹಣ ಮಾಡಿದನು.

ಇಮ್ಮಡಿ ಸೋಮೇಶ್ವರನ ತರುವಾಯ ಕ್ರಿ.ಶ.೧೦೭೬ರಲ್ಲಿ ಆರನೇ ವಿಕ್ರಮಾದಿತ್ಯನು ಕಲ್ಯಾಣನಗರದಲ್ಲಿ ಪಟ್ಟಾಭಿಷಕ್ತನಾದನು ಕ್ರಿ.ಶ. ೧೦೭೬ರಲ್ಲಿ ತನ್ನದೇ ಶಕೆಯನ್ನೇ ಪ್ರಾರಂಭಿಸಿದನು. ಈತನ ಆಸ್ಥಾನ ಕವಿ ಬಿಲ್ಹಣನು ವಿಕ್ರಮನ ವೈಭವೋಪೇರಿತ ಆಳ್ವಿಕೆಯನ್ನು ಬಣಿಸಿದ್ದಾನೆ. ಮೂಲತಃ ಕಾಶ್ಮೀರದನಾಗಿದ್ದ ಬಿಲ್ಹಣನು ರಚಿಸಿರುವ "ವಿಕ್ರಮಾಂಕ ದೇವಚರಿತ"ದ ನಾಯಕನೇ ವಿಕ್ರಮಾದಿತ್ಯನೆಂಬುದು ಶಾಸನಾಧಾರಗಳಿಂದ ಸ್ಪಷ್ಟವಾಗಿ ವ್ಯಕ್ತವಾಗುತ್ತದೆ. ಹಿಂದೂ ಕಾನೂನಿಗೆ ಆಧಾರಭೂತ ಕೃತಿಯಾದ

'ಮಿತಾಕ್ಷರ'ವನ್ನು ಈತನ ಆಸ್ಥಾನದಲ್ಲಿದ್ದ ಹಾಗೂ ಇದೇ ಜಿಲ್ಲೆಯ ಚಿತ್ತಾಪುರ ತಾಲೂಕಿನ ಮರ್ತೂರಿಗೆ ಸೇರಿದ ವಿಜ್ಞಾನೇಶ್ವರನು ರಚಿಸಿದನು. ಈತನ; "ಪ್ರಕಾರ ಕಲ್ಯಾಣದಂಥಾ ನಗರ ಹಿಂದಿರಲಿಲ್ಲ ಮುಂದಿರಲಾರದು. ವಿಕ್ರಮಾದಿತ್ಯನಂತ ಪ್ರಭು ಹಿಂದಿರಲಿಲ್ಲ ಹಾಗೂ ಮುಂದೆ ಬರಲಾರನೆಂದು" ಪ್ರತ್ಯಕ್ಷವಾಗಿ ಕಂಡು ವರ್ಣಿಸಿರುವನು.[೮]

ಗುಲಬರ್ಗಾ ಜಿಲ್ಲೆಯಲ್ಲಿ ಕಲ್ಯಾಣ ಚಾಳುಕ್ಯರ ಕಾಲದ ನೂರಾರು ಶಿಲಾಶಾಸನಗಳು ಲಭ್ಯವಿದ್ದು ಅವುಗಳಲ್ಲಿ ಉಲ್ಲೇಖಿತ ಅಂಶಗಳನ್ನು ಇಲ್ಲಿ ಸ್ಥೂಲವಾಗಿ ಪರಿಚಯ ಮಾಡಿಕೊಡಲಾಗಿದೆ. ಚಾಳುಕ್ಯ ಪ್ರಾರಂಭ ಕಾಲದ ಶಾಸನಗಳು ಈ ಜಿಲ್ಲೆಯಲ್ಲಿ ಲಭ್ಯವಿಲ್ಲ. ಆದರೆ ಈ ಕಾಲದ ಕೆಲವು ಮುಖ್ಯವಾದ ಆಡಳಿತ ವಿಭಾಗಗಳೆಂದರೆ ಸಗರ ೫೦೦ ಪೂರ್ವ ಪಶ್ಚಿಮಗಳಲ್ಲಿ ಅರಲು ೩೦೦ ಹಾಗೂ ವಿಜಾಪುರ ಜಿಲ್ಲೆ ಉತ್ತರ ದಕ್ಷಿಣದಲ್ಲಿ ಕೃಷ್ಣ-ಭೀಮೆಯಲ್ಲಿ ಸಗರನಾಡು ವ್ಯಾಪಿಸಿದಿತ್ತು. ಇದರಲ್ಲಿ ಕೆಂಭಾವಿ ವಿಳ ನೆರೆಯಂಬೊಳ ೨೦ ಮುಂತಾದ ಆಡಳಿತ ಘಟಕಗಳಲ್ಲದೆ ಏವೂರು, ಮುದನೂರ, ಎಳೆವಾರ, ಕುಳಘೇರಿ, ಅಂದೇಲಿ, ಕೊಂಡಗುಳಿ, ಸಗರ, ಸಿರವಾಳ ಇವು ಪ್ರಸಿದ್ಧ ಅಗ್ರಹಾರ ಮತ್ತು ನಗರ ಪಟ್ಟಣಗಳಾಗಿದ್ದವು. ಗುಲಬರ್ಗಾ ಜಿಲ್ಲೆಯ ಅರಲು ೩೦೦ ಇಂದಿನ ಚಿತ್ತಾಪುರ ಹಾಗೂ ಸೇಡಂ ತಾಲ್ಲೂಕುಗಳ ಪ್ರದೇಶವಾಗಿತ್ತು. ಅಲ್ಲೂರ ಎಂಬ ಈಗಿನ ಗ್ರಾಮವೇ ಅರಲು ಎಂದು ಗುರುತಿಸಲಾಗಿದೆ. ಜೇವರ್ಗಿ ತಾಲ್ಲೂಕಿನ ಅಂದೇಲಿಯಲ್ಲಿ ದೊರೆತಿರುವ ಶಾಸನವು ಅಹವಮಲ್ಲ ಮೊದಲನೇ ಸೋಮೇಶ್ವರ ಕಾಲಕ್ಕೆ (೧೦೫೦) ಸೇರಿದ್ದು ಚೆನ್ನಮಾಧವ ದೇವಾಲಯಕ್ಕೆ ಆತನು ನೀಡಿದ ದತ್ತಿಯನ್ನು ದಾಖಲಿಸುತ್ತದೆ.

ಒಂದನೇ ಸೋಮೇಶ್ವರನ (ಚಿತ್ತಾಪುರ ತಾಲೂಕು) ನಾಗಾಯಿ ಶಾಸನವು (೧೦೫೮) ಸ್ಥಳೀಯ ೬೦ಕಂಬದ ದೇವಾಲಯದ ಮುಂಭಾಗದಲ್ಲಿ ಸುದೀರ್ಘವಾದ ಈ ಶಾಸನದಲ್ಲಿ ನಾಗಾವಿಯ ಅಗ್ರಹಾರದ ಘಟಿಕಾಸ್ಥಾನಕ್ಕೆ ಮಧುಪ ಅರಸ ದಣ್ಣಾಯಕನ ದತ್ತಿಬಿಟ್ಟ ವಿಚಾರವಿದೆ. ಆರನೇ ವಿಕ್ರಮಾದಿತ್ಯ (೧೧೧೧)ನ ಆಡಳಿತಾವಧಿಯಲ್ಲಿ ಮಧುವಣಭಟ್ಟನ ಮಗ ಆದಿತ್ಯ ಭಟ್ಟನು ದಂಡಾಧಿಶನಾಗಿದ್ದನೆಂದು ಹಾಗೂ ಈತನು ಆದಿತ್ಯೇಶ್ವರ ದೇವಾಲಯವನ್ನು ಕಟ್ಟಿಸಿ ಹಲವು ದತ್ತಿಗಳನ್ನು ನೀಡಿದ ವಿವರಗಳನ್ನು ಯಡ್ರಾಮಿಯ ಶಾಸನ ಒಂದರಲ್ಲಿ ದಾಖಲಿಸಲಾಗಿದೆ. ವಿಕ್ರಮಾದಿತ್ಯನ ಕಾಲದ ಯಡ್ರಾಮಿಯ ಬಸವಣ್ಣನ ಗುಡಿಯ ಮುಂದಿರುವ ಶಾಸನವು ಸಗರನಾಡಿನ ಮಹಾಮಂಡಲೀಶ್ವರರಾದ ಹೈಹಯವಂಶದವರ ವಂಶಾವಳಿಯನ್ನು ವಿವರವಾಗಿ ನೀಡುತ್ತದೆ. ಗುಲಬರ್ಗಾ ತಾಲೂಕಿನ ಮರ್ತೂರಿನ ಕ್ರಿ.ಶ.೧೧೨೩ರ ತ್ರಿಭುವನಮಲ್ಲನ ಶಾಸನವು 'ಮಿತಾಕ್ಷರ'ವನ್ನು ಬರೆದ ವಿಜ್ಞಾನೇಶ್ವರ ಭಟ್ಟಾರಕನ ಮಗ ಪೆರ್ಗಡೆ ಬೀಚರಾಜನ ಮರಿತೂರಲು (ಮರ್ತೂರು) ಕೇಶವ ದೇವರನ್ನು ಪ್ರತಿಷ್ಠಾಪಿಸಿದ ಬಗೆಗೆ ಉಲ್ಲೇಖಿಸುತ್ತದೆ. ಈ ಶಾಸನದಲ್ಲಿ ವಿಜ್ಞಾನೇಶ್ವರ ಉಲ್ಲೇಖವಿರುವುದರಿಂದ ಇದೊಂದು ಪ್ರಮುಖವಾದ ದಾಖಲೆಯಾಗಿದೆ ಎಂದು ಹೇಳಬಹುದು.

## ಕಲ್ಯಾಣದ ಕಲಚೂರಿಗಳು

ಈ ವಂಶದವರನ್ನು ಕಲಚೂರಿ ಎಂದು ಕರೆದರೂ ಕೂಡ 'ಕೇದಚೂರಿ', 'ಕಲಿಚೂರಿ' ಎಂಬ ಪದಗಳೂ ಶಾಸನಗಳಲ್ಲಿ ಕಂಡು ಬರುತ್ತದೆ. ಗುಲಬರ್ಗಾ ಜಿಲ್ಲೆಯಲ್ಲಿ ಕಲಚೂರಿಗಳ ಕಾಲದ ಸುಮಾರು ೫೦ ಶಾಸನಗಳು ಇಲ್ಲಿಯವರೆಗೂ ಲಭ್ಯವಿದ್ದು. ಸೇಡಂ ತಾಲೂಕಿನ ಅಡಕಿ ಗ್ರಾಮದ ರಾಯಮುರಾರಿ ಸೋಮದೇವನ ಕ್ರಿ.ಶ.೧೧೬೫ರ ಶಾಸನವು ಮಹಾಪ್ರಧಾನ ದಂಡನಾಯಕ ಏಚರಸನು ಹಾಗೂ ಬಾಚಿದೇವರಸನೂ ಅಡಕಿಯ ಚನ್ನ ಪಾರ್ಶ್ವನಾಥ ಜಿನಾಲಯಕ್ಕೆ ನೀಡಿದ ಹಲವು ದತ್ತಿಗಳನ್ನು ಉಲ್ಲೇಖಿಸುತ್ತದೆ. ಅಫಜಲ್‌ಪುರ ತಾಲೂಕಿನ ಚಿನಮಳ್ಳಿಯಲ್ಲಿ ದೊರೆತಿರುವ ಕ್ರಿ.ಶ. ೧೧೬೭ರ ಶಾಸನವು ಕಲಚೂರಿ ರಾಯಮುರಾರಿ ಬಗ್ಗೆ ತಿಳಿಸುತ್ತದೆ. ಚಿತ್ತಾಪುರ ತಾಲೂಕಿನ ಕಾಳಿಗೆಯ ಕ್ರಿ.ಶ.೧೧೭೩ರ ಶಾಸನವು ರಾಯಮುರಾರಿ ಸೋವಿದೇವನು  ಮಾದಿಗನೂರ ನೆಲೆವೀಡಿನಲ್ಲಿರುವಾಗ ದಂಡನಾಯಕ ಮಾಧವಯ್ಯನ ಆಡಳಿತ ಬಗ್ಗೆ ಪ್ರಸ್ತಾಪಿಸುತ್ತದೆ. ಕಾಳಿಗೆಯನ್ನು ರಾಜಧಾನಿ ಕಾಳುಗೆ ಎಂದು ಉಲ್ಲೇಖಿಸುತ್ತದೆ.[೧೨] ಈ ಶಾಸನಗಳಿಂದ ಕಲ್ಯಾಣದ ಕಲಾಚೂರಿಗಳು ಗುಲಬರ್ಗಾದಲ್ಲಿ ಆಳ್ವಿಕೆಯ ಮಾಡಿದರು ಎಂದು ಹೇಳಬಹುದು.

## ದೇವಗಿರಿಯ ಸೇವುಣರು

ದೇವಗಿರಿಯ ಯಾದವರ ಇತಿಹಾಸವು ಕಲ್ಯಾಣದ ಚಾಳುಕ್ಯರು ಮತ್ತು ಕಲಚೂರಿಗಳ ಅಧಿಪತ್ಯವು ಕೊನೆಗೊಂಡ ನಂತರ ಕರ್ನಾಟಕದಲ್ಲಿ ಪ್ರಾರಂಭವಾಯಿತು. ಐದನೇ ಬಿಲ್ಲಮನು (೧೧೮೫-೧೧೯೩) ಕಲ ಚೂರಿಯರನ್ನು ಮತ್ತು ಕಲ್ಯಾಣಿ ಚಾಳುಕ್ಯರನ್ನು ಸೋಲಿಸಿದ ನಂತರ ಅಲ್ಲಿಂದ ಮುಂದಕ್ಕೆ ಈ ವಂಶದ ಹೆಸರು ದೇವಗಿರಿಯ ಯಾದವರು ಅಥವಾ ಸೇವುಣರೆಂದೇ ಬಳಕೆಗೆ ಬಂದಿತು. ಗುಲಬರ್ಗಾ ಜಿಲ್ಲೆಯಲ್ಲಿ ಸೇವುಣರ ಕಾಲದ ಹಲವಾರು ಶಾಸನಗಳು ಲಭ್ಯವಿದ್ದು, ಶಹಾಪುರ ತಾಲೂಕಿನ ಶಿರವಾಳದ ಭಿಲ್ಲಮನ ಕ್ರಿ.ಶ.೧೧೮೯ ಶಾಸನವು ಅವನಿಗೆ ಅಧೀನರಾದ ಶಾಖೆಯ ಶಿಲಾಹರ ವಂಶದ ಎಳ ಮೇಲೆ ಸಿಂಗಿ ದೇವರಸನ ತಾಯಿ ನಾಗಲದೇವಿ ಮುಂತಾದವರು. ಚಿತ್ತಾಪೂರ ತಾಲೂಕಿನ ಇಂಗಳಿಗೆಯ ಯಾದವ ಸಿಂಘಣನ ೧೨೪೦ರ ಶಾಸನವು ಮಹಾಮಂಡಳೇಶ್ವರ ಬಿಜ್ಜರಸ, ಇಂಗಳಿಗೆ ಪ್ರಭು ನಾಗರಸ, ಪಂಚಮಠದವರು ಮೂಲಸ್ಥಾನದೇವರಿಗೆ ಬಿಟ್ಟು ಭೂ ದತ್ತಿಯ ಬಗೆಗೆ ಉಲ್ಲೇಖಿಸುತ್ತದೆ. ಹೀಗೆ ಹಲವಾರು ಶಾಸನಗಳಿಂದ ಇವರ ಆಡಳಿತಕ್ಕೆ ಒಳಪಟ್ಟಿತು ಎಂದು ಹೇಳಬಹುದು.

## ವಿಜಯನಗರ ಸಾಮ್ರಾಜ್ಯ

ವಿಜಯನಗರ ಸಾಮ್ರಾಜ್ಯವು ಕ್ರಿ.ಶ. ೧೩೩೬ರಲ್ಲಿ ಸಂಗಮನ ಮಕ್ಕಳಾದ ಹರಿಹರ ಮತ್ತು ಬುಕ್ಕರಾಯರಿಂದ ತುಂಗಭದ್ರಾ ನದಿ ದಂಡೆಯಲ್ಲಿರುವ ಪಂಪಾಕ್ಷೇತ್ರವೆಂದು ಪ್ರಸಿದ್ಧಿಯಾಗಿರುವ ಹಂಪಿಯಲ್ಲಿ ಸ್ಥಾಪಿನೆಯಾಯಿತು. ಈ ಸಾಮ್ರಾಜ್ಯ ಸ್ಥಾಪನೆಯ ಮುಖ್ಯ ಉದ್ದೇಶ ಮುಸ್ಲೀಮರ ದಾಳಿಗಳಿಂದ ಹಿಂದೂ ಧರ್ಮ ಮತ್ತು ಸಂಸ್ಕೃತಿಯನ್ನು ಸಂರಕ್ಷಿಸಿ ಪೋಷಿಸುವುದಾಗಿತ್ತು. ಈ ಸಾಮ್ರಾಜ್ಯ

ಸ್ಥಾಪನೆಗೆ ವಿವಿಧ ಧರ್ಮಗುರುಗಳು ನೆರವಾಗಿದ್ದರು. ಗುಲಬರ್ಗಾ ಪ್ರದೇಶಕ್ಕೆ ಸಂಬಂಧ ಪಟ್ಟಂತೆ ಮಹಾನ್ ಸಾಮ್ರಾಜ್ಯದ ಅರಸರನ್ನು ಉಲ್ಲೇಖಿಸುವ ಶಾಸನಗಳು ಕೃಷ್ಣದೇವರಾಯನ (೧೫೦೯-೧೫೨೯) ಆಳ್ವಿಕೆಯ ಕಾಲದವರೆಗೆ ಲಭ್ಯವಿರುವುದಿಲ್ಲ ಕೃಷ್ಣದೇವರಾಯನ ಕಾಲದ್ದೆಂದು ಹೇಳಲಾಗುವ ತಾಮ್ರ ಶಾಸನವು ಶಹಾಪುರದ ವಿಶ್ವಕರ್ಮರ ಏಕದಂಡಿ ಮಠದಲ್ಲಿದೆ ಎಂದು ಚಾರಿತ್ರಿಕ ದಾಖಲೆಗಳು ಹೇಳುತ್ತವೆ.

ಕೃಷ್ಣದೇವರಾಯನು ವಿಜಾಪುರದ ಅರಸರನ್ನು ಸೋಲಿಸಿ ಕ್ರಿ.ಶ.೧೫೨೦ರಲ್ಲಿ ನಾಲ್ಕು ದಿನ ವಿಜಾಪುರದ ರಾಜಧಾನಿಯಲ್ಲೇ ತಳವೂರಿದನು. ರಾಯಚೂರ ದೊ-ಆಬ್-ಅನ್ನು ತನ್ನ ವಶಕ್ಕೆ ತೆಗೆದುಕೊಂಡನು. ಗುಲಬರ್ಗಾ, ಬೀದರ್ ಆಗ ಬಹಮನಿಗಳ ಪ್ರವೇಶಿಸಿದನು. ಕ್ರಿ.ಶ.೧೫೨೩ರಲ್ಲಿ ಮಹಮ್ಮದನ ಮೊಮ್ಮಕಳಾದ ಮೂರನೇ ಅಲ್ಲಾ ಉದ್ ದೀನ್ ವಲಿಉಲ್ಲಾ ಮತ್ತು ಕಲಿಮುಲ್ಲಾಗಳನ್ನು ಬಿಡುಗಡೆ ಮಾಡಿ ಅನಂತರ ಹಿರಿಯ ಮಗನಾದ ಮೂರನೆ ಅಲ್ಲಾ-ಉದ್-ದೀನನನ್ನು ಗುಲಬರ್ಗಾದ ಸುಲ್ತಾನನ್ನಾಗಿ ನೇಮಿಸಿ ವಲಿ ಉಲ್ಲಾ ಮತ್ತು ಕಲೀಮುಲ್ಲಾಗಳನ್ನು ತನ್ನೊಡನೆ ವಿಜಯನಗರಕ್ಕೆ ಕರೆದುಕೊಂಡು ಹೋಗಿ ಅಲ್ಲಿ ಸುರಕ್ಷಿತವಾಗಿಟ್ಟು ನೋಡಿಕೊಂಡನೆಂದು ತಿಳಿದು ಬರುತ್ತದೆ. ವಿಜಯನಗರ ಸಾಮ್ರಾಜ್ಯವು ಮತ್ತು ಹಲವು ದಶಕಗಳ ಕಾಲ ಮುಂದುವರಿದರೂ ಗುಲಬರ್ಗಾ ಜಿಲ್ಲೆಯ ಮೇಲೆ ಅವರ ಪ್ರಭಾವವು ಯಾವುದೇ ರೀತಿಯಲ್ಲೂ ಉಂಟಾಗಲಿಲ್ಲ ವಿಜಾಪುರದ ಆದಿಲ್‌ಷಾಹಿಗಳ ಈ ಭಾಗವನ್ನು ತಮ್ಮ ವಶಕ್ಕೆ ಪೂರ್ಣವಾಗಿ ತೆಗೆದುಕೊಂಡರು.

## ಬಹಮನಿಯ ಸಾಮ್ರಾಜ್ಯ (ಕ್ರಿ.ಶ. ೧೩೪೭-೧೫೨೮)

ಮಹಮ್ಮದ್ ಬಿನ್ ತುಘಲಕ್ ವಿರುದ್ಧ ಸ್ಫೋಟಕಗೊಂಡ ವಿವಿಧ ಪ್ರಾಂತ್ಯಗಳ ಬಂಡಾಯದ ಪ್ರಮುಖ ಪರಿಣಾಮವೆಂದರೆ. ಗುಲಬರ್ಗಾದಲ್ಲಿ ಬಹಮನಿ ಸಾಮ್ರಾಜ್ಯದ ಸ್ಥಾಪನೆಯೆಂದು ಹೇಳಲಾಗುತ್ತದೆ. ಕ್ರಿ.ಶ.೧೩೪೭ರಲ್ಲಿ ಹಸನ್‌ನನ್ನು ರಾಜನನ್ನಾಗಿ ಮಾಡಿದರು. ಇವನ ಪೂರ್ಣ ಹೆಸರು "ಅಲ್ಲಾವುದ್‌ದೀನ್ ಹಸನ ಬಹಮನ್ ಷಾ" ನಂತರ ಇವನು ಗುಲಬರ್ಗಾವನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡು ಗುಲಬರ್ಗಾದ ಮಸೀದಿಯೊಂದರಲ್ಲಿರುವ ಪರ್ಷಿಯನ್ ಶಾಸನವು ಈತನಿಗೆ "ಸಿಖಂದರ್-ಇ-ಸಾನಿ ಅಲ್ಲಾ-ಉದ್-ದೀನ್ ಹಸನ್ ಬಹಮನ್ ಷಾ-ಅಲ್-ವಲಿ" ಎಂಬ ಬಿರುದು ಇತ್ತೆಂದು ಉಲ್ಲೇಖಿಸುತ್ತವೆ. ಬಹಮನ್ ಷಾ ಎಂಬುದು ಈತನ ವಂಶದ ಮೂಲನೆಂದು ಅಭಿಪ್ರಾಯವಿದೆ. ಆದರೆ ಫರಿಷ್ತಾನ ಹೇಳಿಕೆಯ ಪ್ರಕಾರ ಬ್ರಾಹ್ಮಣನೊಬ್ಬನಲ್ಲಿ ಅಲ್ಲಾ-ಉದ್-ದೀನ್‌ನನ್ನು ಸೇವಕನಾಗಿದ್ದುದರಿಂದ ಮಾಲೀಕನ ಸ್ಮರಣೆಗಾಗಿ ತನ್ನನ್ನು ತಾನು "ಗಂಗೂ ಬಹಮನಿ" ಎಂದು ಕರೆದುಕೊಂಡನೆಂದು ವ್ಯಕ್ತವಾಗುತ್ತದೆ.[೧೯] ಅಲ್ಲಾ ಉದ್ದೀನ್ ಬಹಮನ್ ಷಾ ತನ್ನ ರಾಜ್ಯವನ್ನು ನಾಲ್ಕು ತರಫ್ ಅಥವಾ ವಿಭಾಗಗಳನ್ನಾಗಿ ವಿಂಗಡಿಸಿದ್ದನು. ಅವುಗಳೆಂದರೆ ದಾಬೋಳವರೆಗಿನ ಮತ್ತು ಕೃಷಾ ತುಂಗಭದ್ರಾ ಪ್ರದೇಶಗಳನ್ನೊಳಗೊಂಡ ಅಸನಬಾದ್-ಗುಲಬರ್ಗಾ, ದೌಲತಬಾದ್, ಬೀದರ್, ಮತ್ತು ಕಾಂದಹಾರ್ (ಇಂದೂರ್ ಮತ್ತು ತೆಲಂಗಾಣದ ಕೆಲವು ಪ್ರದೇಶಗಳನ್ನೊಳಗೊಂಡ ಬೀದರ್) ಇವುಗಳಲ್ಲಿ ಗುಲಬರ್ಗಾ ಪ್ರಾಂತ್ಯವೇ ಬಹಳ

ಮುಖ್ಯವಾದ ಆಡಳಿತ ಘಟಕವಾಗಿತ್ತು. ಅಲ್ಲಾ-ಉದ್-ದೀನ್ ಬಹಮನ್ ಷಾ ಕ್ರಿ.ಶ. ೧೩೫೮ರಲ್ಲಿ ನಿಧನನಾದಾಗ ಆತನ ಮಗನಾದ ಮೊದಲನೆ ಮಹಮ್ಮದ್ ಷಾ (೧೩೫೮-೭೭) ಪಟ್ಟಕ್ಕೆ ಬಂದನು. ಬಹಮನ್ ಷಾನ ಆಳ್ವಿಕೆಯ ಅವಧಿಯಲ್ಲಿ ತನ್ನ ರಾಜಧಾನಿ ನಗರವಾದ ಗುಲಬರ್ಗಾವನ್ನು ಬೃಹತ್ ಕಟ್ಟಡಗಳಿಂದ ಹಾಗೂ ಉತ್ತಮ ನಗರ ವ್ಯವಸ್ಥೆಗಳಿಂದ ಆಧುನಿಕಗೊಳಿಸಿದನು. ಈ ಕಾಲದ ಪ್ರಸಿದ್ಧ ಸೂಫಿ ಸಂತರಾಗಿದ್ದ ಶೇಕ್ ಫಾರಿಬ್, ಶೇಕ್ ಬಿಜಾಪುರಿ ಮತ್ತು ಶೇಕ್ ಜುನಾದಿಗಳಿಗೆ ಆಶ್ರಯ ನೀಡಿದ್ದನಲ್ಲದ ಸ್ವತಃ ಈ ಸೂಫಿ ಸಂತರುಗಳ ನಿಷ್ಠಾವಂತ ಭಕ್ತನಾಗಿದ್ದನು.

ಹಿಂದೂ ಪ್ರತಿಭಟನೆಯ ವಿಜಯನಗರದ ಸ್ಥಾಪನೆಯಲ್ಲಿ ಫಲಿತವಾಯಿತು. ಮುಸ್ಲಿಂ ಪ್ರತಿರೋಧವು ಬಹಮನಿ ರಾಜ್ಯದ ಸ್ಥಾಪನೆಯಲ್ಲಿ ಈ ಸರಳವಾದ ವಿಶ್ಲೇಷಣೆಯು ಎಲ್ಲಾ ಪ್ರಶ್ನೆಗಳಿಗೂ ಉತ್ತರಿಸುವುದಿಲ್ಲ. ವಿಜಯನಗರ ರಾಜ್ಯವನ್ನು ಮುಸ್ಲಿಂ ಸವಾಲಿಗೆ ಎದುರಾಗ ಹಿಂದೂ ಪ್ರತಿಕ್ರಿಯೆ ಎಂದು ಚಿತ್ರಿಸಲಾಗಿದೆ. ಸ್ವತಃ ಮುಸ್ಲಿಂ ಆದ ಬಹಮನಿ ರಾಜ್ಯವು ಮುಸ್ಲಿಂ ಸವಾಲಿಗೆ ಒಡ್ಡಿದ ಪ್ರತಿಕ್ರಿಯೆ ಎಂದೇಕೆ ಆಗಬೇಕು? ಮತವು ರಾಜ್ಯದ ಉದಯಕ್ಕೆ ಪ್ರೇರಕ ಅಂಶವಾಗುದಾದರೆ ಅದೇ ಮತವು ಪರಸ್ಪರ ಘರ್ಷಣೆಗೆ ಏಕೆ ಎಡೆಗೊಡಬೇಕು? ಅದು ಆತ್ಮ ಪರಾಭವವಲ್ಲವೆ? ಇದೇ ಹಿಂದೂ ಮುಸ್ಲಿಂ ಘರ್ಷಣೆಯ ಸತ್ವವು ಇದರ ಅನೇಕ ರಾಜವಂಶಗಳ ಉದಯವನ್ನು ವಿವರಿಸುತ್ತದೆ.[೯]

ಮೊದಲನೆ ಮಹಮ್ಮದನು ನಿಧನವಾದ ಮೇಲೆ ಕ್ರಿ.ಶ. ೧೩೭೫ರಲ್ಲಿ ಅವನ ಮಗ ಅಲ್ಲಾವುದ್ದೀನ್ ಮುಜಾಹಿದನು ಪಟ್ಟಕ್ಕೆ ಬಂದನು. ಇತನು ಸಹ ವಿಜಯನಗರದೊಡನೆ ಸೆಣಸಾಟವನ್ನು ಮುಂದುವರಿಸಿದನು. ಬಹಮನಿಯ ಸಿಂಹಾಸನವನ್ನೇರಿದ ಎರಡನೇ ಮಹಮ್ಮದ್ (ಕ್ರಿ.ಶ.೧೩೭೮-೯೭) ಒಬ್ಬ ಪರಿಜ್ಞಾವಾತ ಆಡಳಿತಗಾರ ಹಾಗೂ ಸ್ವತಃ ಪಂಡಿತನೂ ಆಗಿದ್ದನು. ಇತನು ತನ್ನ ಅಧಿಕಾರಿ ಫಬ್ರಿ ಇ ದವಲಾ ಮತ್ತು ಮುಲಾರ ಷಾ ಸುಲ್ತಾನೆ ಎಂಬ ಆತನ ಹೆಂಡತಿ ಇಬ್ಬರ ನೇತೃತ್ವದಲ್ಲಿ ಗುಲಬರ್ಗಾದಲ್ಲಿ ಮಸೀದಿ ಕಟ್ಟಿಸಿದ ಬಗ್ಗೆ ಈತನ ಕ್ರಿ.ಶ. ೧೪೯೪-೯೫ರ ಪರ್ಷಿಯನ್ ಶಾಸವು ಉಲ್ಲೇಖಿಸುತ್ತದೆ.

ಹಸನ್ ಬಹಮನ್ ಷಾನ ಮೊಮ್ಮಗನಾಗಿದ್ದ ತಾಜುದ್ದೀನ್ ಫಿರೋಜನು (ಕ್ರಿ.ಶ.೧೪೯೭-೧೪೨೨) ತನ್ನ ಆಡಳಿತವನ್ನು ಪವಿತ್ರ ಕುರಾನ್ ಗ್ರಂಥದ ತತ್ವಗಳ ಆಧಾರದ ಮೇಲೆ ನಿಯಂತ್ರಿಸವ ಸಮಾಜದಲ್ಲಿ ಸ್ತ್ರೀಯರಿಗೆ ವಿಶೇಷ ಸ್ಥಾನಮಾನ ನೀಡಿದನು.[೨]

ಗುಲಬರ್ಗಾ ಹಾಗೂ ಫಿರೋಜಾಬಾದ್‌ಗಳಲ್ಲಿ ಅನೇಕ ಕಟ್ಟಡಗಳನ್ನು ನಿರ್ಮಿಸಿದನೆಂದು ತಿಳಿದು ಬರುತ್ತದೆ. ಸ್ಪೇನಿನ ಕೊರ್ಡೋಲಾ ಎಂಬಲ್ಲಿರುವ ಸುಂದರವಾದ ಮಸೀದಿಯ ಮಾದರಿಯಲ್ಲೇ ಗುಲಬರ್ಗಾದಲ್ಲಿ ಜುಮ್ಮಾ ಮಸೀದಿಯನ್ನು ನಿರ್ಮಿಸಿದನು. ಈತನ ತಮ್ಮನಾದ ಅಹಮ್ಮದ್‌ನ ಸುಮಾರು ೨೦.೦೦೦ ಸೇನೆಯ ಬಲದೊಂದಿಗೆ ೨೨ನೇ ಸೆಪ್ಟಂಬರ್ ೧೪೨೨ರಂದು ಗುಲಬರ್ಗಾದ ಮೇಲೆ ಧಾಳಿ ಮಾಡಿ ಸಾಮ್ರಾಜ್ಯದ ಸುಲ್ತಾನನೆಂದು ಪಟ್ಟಾಭಿಷಕ್ತನಾದನು. ಇದಾದ ಕೆಲವೇ ದಿನಗಳಲ್ಲಿ ಫಿರೋಜನು ನಿಧನನಾದನು. ಅಹಮ್ಮದ್‌ನ ದಾಳಿಯೊಂದಿಗೆ ಗುಲಬರ್ಗಾದಲ್ಲಿ ಬಹಮನಿಯ ಸಾಮ್ರಾಜ್ಯದ ಅಂತ್ಯವೂ ಆಯಿತು. ಏಕೆಂದರೆ ಆತನು ರಾಜಧಾನಿಯನ್ನು ಬೀದರ್‌ಗೆ ಸ್ಥಳಾಂತರಿಸಿದನು.

**ಬಿಜಾಪುರದ ಆದಿಲ್ ಷಾಹಿಗಳು (ಕ್ರಿ.ಶ.೧೪೮೯-೧೬೮೬)**

ಬಹಮನಿ ಸಾಮ್ರಾಜ್ಯವು ಪತನಗೊಂಡ ನಂತರ ಅಸ್ತಿತ್ವಕ್ಕೆ ಬಂದ ಐದು ಪ್ರಮುಖ ಷಾಹಿ ರಾಜ್ಯಗಳಲ್ಲಿ ಬಿಜಾಪುರದ ಆದಿಲ್ ಷಾಹಿಗಳ ಸಾಮ್ರಾಜ್ಯವು (೧೪೯೦) ಪ್ರಮುಖ್ಯವಾದದು. ಯೂಸುಫ್ ಆದಿಲ್‌ಖಾನನು ಕ್ರಿ.ಶ.೧೪೯೦ರಲ್ಲಿ ಸ್ವತಂತ್ರವಾಗಿ ಹೊಸದೊಂದು ರಾಜ್ಯವನ್ನು ಸ್ಥಾಪಿಸಿಕೊಂಡನೆಂದು ತಿಳಿದು ಬರುತ್ತದೆ. ಕ್ರಿ.ಶ.೧೫೧೦ರಲ್ಲಿ ಗೋವೆಯನ್ನು ಪೋರ್ಚುಗೀಸರಿಂದ ಕಿತ್ತುಕೊಂಡದ್ದು. ಇದರ ತರುವಾಯ ಅದೇ ವರ್ಷ ಸಂಭವಿಸಿದ ವಿಜಯನಗರ ವಿರುದ್ಧದ ಯುದ್ಧದಲ್ಲಿ ಯೂಸುಫ್ ಆದಿಲಾ ಷಾ ನಿಧನನಾದನು. ಈತನ ಸಮಾಧಿಯು ಇವನ ಪೂಜಿಸುತ್ತಿದ್ದ ಶಹಾ ಹಬೀಬುಲ್ಲಾ ಸಂತನ ಸಮಾಧಿಯ ಬಳಿಯಲ್ಲಿ ಗುಲಬರ್ಗಾ ಗೋಗಿಯಲ್ಲಿರುವುದು ಆದಿಲ್ ಷಾನ ತರುವಾಯ ಅವನ ಮಗನಾದ ಇಸ್ಮಾಯಿಲ್ ಕ್ರಿ.ಶ.೧೫೧೦ರಲ್ಲಿ ಪಟ್ಟಕ್ಕೆ ಬಂದನು. ಈತನ ದುರ್ಬಲತೆಯನ್ನು ಉಪಯೋಗಿಸಿಕೊಂಡು ಕೃಷ್ಣದೇವರಾಯನು ಕ್ರಿ.ಶ.೧೫೧೨ರಲ್ಲಿ ರಾಯಚೂರನ್ನು ಬಿಜಾಪುರದಿಂದ ಗೆದ್ದುಕೊಂಡನು. ನಂತರ ಕೆಲವೇ ವರ್ಷಗಳ ತರುವಾಯ ರಾಯಚೂರನ್ನು ಬಿಜಾಪುರದ ಸುಲ್ತಾನನು ಗೆದ್ದುಕೊಂಡನು. ಇದಕ್ಕೆ ಉತ್ತರವಾಗಿ ಕೃಷ್ಣದೇವರಾಯನು ಕ್ರಿ.ಶ.೧೫೨೦ರಲ್ಲಿ ಅದನ್ನು ಮರಳಿ ಗೆದ್ದುಕೊಂಡನು. ಇಸ್ಮಾಯಿಲ್ ಅಹಮದ್‌ನಗರ ನಿಜಾಂ ಷಾನೊಡನೆ ವೈವಾಹಿಕ ಸಂಬಂಧ ಬೆಳೆಸಿ ಆತನ ಸ್ನೇಹವನ್ನು ಸಂಪಾದಿಸಿದನು. ಇದೇ ರೀತಿ ಬಿರಾರಿನ ಅಲ್ಲಾವುದ್ದೀನನ ಸ್ನೇಹವನ್ನು ಗಳಿಸಿ ಕ್ರಿ.ಶ.೧೫೩೯ರಲಿ ಬೀದರನ್ನು ಮುತ್ತಿಗೆ ಹಾಕಿ ಆಮೀರ್ ಖರೀದ್‌ನನ್ನು ಸೆರೆಹಿಡಿದು ತನ್ನ ಆಸ್ಥಾನಕ್ಕೆ ತಂದನು. ಕ್ರಿ.ಶ.೧೫೩೯ರಲ್ಲಿ ಕೃಷ್ಣದೇವರಾಯನು ನಿಧನನಾದ ಮೇಲೆ ರಾಯಚೂರು, ಮುದಗಲ್ ಹಾಗೂ ಬೆಳಗಾವಿಯನ್ನು ಪುನಃ ಗೆದ್ದುಕೊಂಡನು. ಮುಂದೆ ಗುಲಬರ್ಗಾ ಜಿಲ್ಲೆಯು ವಿಜಾಪುರದ ಜೊತೆಗೆ ಔರಂಗಜೇಬನ ನೇತೃತ್ವದ ಮೊಗಲರ ಆಳ್ವಿಕೆಗೆ ಒಳಪಟ್ಟಿತು.

**ಸುರಪುರ ನಾಯಕರು (ಕ್ರಿ.ಶ.೧೬೩೬-೧೮೫೮)**

ಸುರಪುರ ಸಂಸ್ಥಾನದ ಅರಸರು ಗೋಸಲ ವಂಶದವರೆಂದೇ ಕರೆಯುವುದು ರೂಢಿಯಲ್ಲಿದೆ. ಇವರು ಗೋವುಗಳನ್ನು ಸಂರಕ್ಷಿಸುತ್ತಿದ್ದರಿಂದ ಇವರಿಗೆ ಗೋಸಲ ವಂಶದವರೆಂದು ಕರೆಯಲಾಗುತ್ತಿತ್ತೆಂದು ಹೇಳಲಾಗುತ್ತಿದೆ. ಈ ವಂಶದ ಮೂಲ ಪುರುಷ ನರಸಿಂಹನಾಯಕ, ಸುರಪುರದ ಗಡ್ಡಿಪಿಡ್ಡನಾಯಕನು (ಕ್ರಿ.ಶ.೧೬೩೯-೬೬) ಈ ವಂಶದ ಪ್ರಥಮ ಪ್ರಮುಖ ಅರಸ ಎಂದು ತಿಳಿದು ಬರುತ್ತದೆ. ಗಡ್ಡಿಪಿಡ್ಡನಾಯಕನ ಮರಣದ ನಂತರ ಆತನ ಮಗನಾದ ಪಾಮನಾಯಕನಿಗೆ ತನ್ನ ಎಲ್ಲಾ ಅಧಿಕಾರ ಕೊಟ್ಟಿರುವ ಸನ್ನದ್ ಕೂಡ ಲಭ್ಯವಿದೆ. ಗುಲಬರ್ಗಾ ಜಿಲ್ಲೆಯಲ್ಲಿ ಕೃಷ್ಣಾ ಮತ್ತು ಭೀಮಾ ನದಿಯ ನಡುವಿನ ಪ್ರದೇಶಕ್ಕೆ ಸಗರನಾಡು ಅಥವಾ ಸಗರಗಡ್ಡೆ ಎಂದು ಕರೆಯುವುದು ಸಾಮಾನ್ಯವಾಗಿ ರೂಢಿಯಲ್ಲಿದೆ. ಈಗಿನ ಶಹಾಪುರ ತಾಲೂಕಿನ ಕೇಂದ್ರಕ್ಕೆ ಹೊಂದಿಕೊಂಡಂತೆ ಉನ್ನತವಾದ ಬೆಟ್ಟದ ಮೇಲೆ ಒಂದು ದುರ್ಗವಿದೆ. ವಿಜಾಪುರ ರಾಜ್ಯದ ಪೂರ್ವಭಾಗವು ಮೂರು ಬಾದ್ ಶಾಹಿ ರಾಜ್ಯಗಳ

ಗಡಿನಾಡಾಗಿತ್ತು.[೨೧] ಗೋವಳಕೊಂಡೆಯ ರಾಜ್ಯವು ಮಳಖೇಡವರೆಗೆ ಹಬ್ಬಿತು. ಪಿಡ್ಡನಾಯಕ ಮತ್ತು ಅವನ ಮಗ ಪಾಮನಾಯಕ ಇಬ್ಬರೂ ಕೂಡಿ ಶಹಾಪುರ.

ಕಿಲ್ಲೆಯಿಂದ ತೆರವು ಮಾಡಿಸಲು ವಿಜಾಪುರದ ಸುಲ್ತಾನನು ಫತ್ತೆಖಾನ್ ಮತ್ತು ಹಮಿದ್ ಎಂಬ ಸರದಾರರ ನೇತೃತ್ವದಲ್ಲಿ ಪ್ರಬಲ ಸೇನೆಯನ್ನು ಕಳುಹಿಸಿದನು. ಆ ಸಮಯದಲ್ಲಿ ಹೋರಾಟ ಮಾಡಿದರೂ ಕೊನೆಗೆ ಪರಾಭವಗೊಂಡ ಗಡ್ಡಿನಾಯಕನ ಮಗನಾದ ಪಾಮನಾಯಕನನ್ನು ವಿಜಾಪುಕ್ಕೆ ಕರೆದೊಯ್ಯಲಾಯಿತು. ಅಲ್ಲಿ ಆನೆಯ ಜೊತೆಗೆ ಹೋರಾಟದಲ್ಲಿ ಪಾಮನಾಯಕನು ಜಯಶೀಲನಾಗಲು ವಿಜಾಪುರದ ಸುಲ್ತಾನನ ಸಗರ ನಾಡಿನ ಎಲ್ಲಾ ಪ್ರಾಂತ್ಯಗಳನ್ನು ಇವನಿಗೆ ಇನಾಮಾಗಿ ನೀಡಿದನೆಂದು ಕೈಫಿಯತ್ತು ತಿಳಿಸುತ್ತದೆ. ಹೀಗೆ ಸುರಪುರದ ಸಂಸ್ಥಾನದಲ್ಲಿ ನಾಯಕರ ಆಳ್ವಿಕೆ ಆರಂಭಗೊಂಡಿತ್ತು. ಮತ್ತು ಕ್ಯಾಪ್ಟನ್ ಗ್ರಿಸ್ಲೆ ಸುರಪುರದಲ್ಲಿ ಇರುವಾಗಲೇ ಕೃಷ್ಣಪ್ಪನಾಯಕನು ನಿಧನನಾದನು. ಈತನ ತರುವಾಯ ಏಳು ವರ್ಷದ ನಾಲ್ವಡಿ ವೆಂಕಟಪ್ಪ ನಾಯಕರು ಕ್ರಿ.ಶ. ೧೮೪೨-೫೮ ಅಧಿಕಾರಕ್ಕೆ ಬಂದನು. ಆತನು ಅಪ್ರಾಪ್ತ ವಯಸ್ಕನಾಗಿದ್ದರಿಂದ ಇವನ ತಾಯಿ ಈಶ್ವರಮ್ಮ ಆಡಳಿತ ನಡೆಸಿದಳು. ಕ್ಯಾಪ್ಟನ್ ಗ್ರಿಸ್ಲೇಯ ಬದಲು ಕ್ಯಾಪ್ಟನ್ ಮೆಡೊಸ್ ಟೇಲರನು ರಾಜಕೀಯ ಪ್ರತಿನಿಧಿಯಾಗಿ ಬ್ರಿಟಿಷರ ಅಧಿಕಾರ ೧೮೪೩ರಲ್ಲಿ ನೇಮಕ ಮಾಡಿತು. ಈತನು ಎಲ್ಲಾ ರೀತಿಯಿಂದಲೂ ಆಡಳಿತ ಸುಧಾರಣೆಗಳನ್ನು ಜಾರಿಗೊಳಿಸಿ ಸಂಸ್ಥಾನದ ರಾಜಕೀಯ ಪರಿಸ್ಥಿತಿಯನ್ನು ಉತ್ತಮ ಪಡಿಸಿದನು. ಇಲ್ಲಿಂದ ಮುಂದೆ ಸುರಪುರ ನಾಯಕರ ಯಾವುದೇ ಸ್ವತಂತ್ರ ಅಧಿಕಾರವನ್ನು ಹೊಂದದೇ ಕೇವಲ ಇಂಗ್ಲೀಷರ ಅಧೀನ ಅರಸರಾಗಿ ಮುಂದುವರೆದರು. ನಾಲ್ವಡಿ ವೆಂಕಟಪ್ಪ ನಾಯಕನೇ ಈ ವಂಶದ ಕೊನೆಯ ಅರಸನೆಂದು ಹೇಳಲಾಗುತ್ತದೆ.

### ಹೈದರಾಬಾದ ನಿಜಾಮ ವಂಶದ ಉದಯ (ಕ್ರಿ.ಶ. ೧೭೨೪-೧೯೪೮)

ಔರಂಗಜೇಬನ ನೆಚ್ಚಿನ ದಂಡನಾಯಕನಾಗಿ ಸೇವೆ ಸಲ್ಲಿಸಿದ್ದ ನಿಜಾಮ ಉಲ್ ಮುಲ್ಕ್ ಆಸಫ್ ಜಾಹ ಕ್ರಿ.ಶ.೧೭೧೩ರಲ್ಲಿ ನಿಜಾಮ ಅಥವಾ ಅಸಫಜಾಹಿ ವಂಶದ ಸ್ಥಾಪನೆಯನ್ನು ಮಾಡಿದನೆಂದು ಹೇಳಲಾಗುತ್ತದೆ. ಆಸಫ್‌ಜಾಹಿ ಔರಂಗಜೇಬನ ನಿಧನದ ತರುವಾಯ ಕ್ರಿ.ಶ.೧೭೧೩ರಲ್ಲಿ ದಖನ್ನಿನ ಸುಬೇದಾರನಾಗಿ ನೇಮಕಗೊಂಡ ಮೇಲೆ ದಕ್ಷಿಣ ಭಾಗದ ಆಡಳಿತ ಹತೋಟಿಯಲ್ಲಿ ಹಲವು ಪರಿವರ್ತನೆಗಳ ಗೋಚರವಾದವು. ಈತನು ಕ್ರಿ.ಶ.೧೭೧೯ರಲ್ಲಿ ಮಾಳ್ವದ ಸುಬೇದಾರನಾಗಿ ನೇಮಕ ಮಾಡಲಾಯಿತು.[೨೨] ಈ ತಂತ್ರದ ದುರಾಲೋಚನೆಯನ್ನು ಅರಿತುಕೊಂಡ ನಿಜಾಮನು ಕ್ರಿ.ಶ.೧೭೨೦ರಲ್ಲಿ ದಿಲ್‌ವರ್‌ನನ್ನು ರತನ್‌ಪುರ ಯುದ್ಧದಲ್ಲಿ ಪರಾಭವಗೊಳಿಸಿದನು. ನಿಜಾಮ ಉಲ್ ಮುಲ್ಕ್‌ನನ್ನು ದೆಹಲಿಯಲ್ಲಿ ವಜೀರ್ ಆಗಿ ನೇಮಕ ಮಾಡಲಾಯಿತು. ಆದರೆ ಆತನಿಗೆ ಈ ಹುದ್ದೆಯಲ್ಲಿ ಆಸಕ್ತಿ ಇಲ್ಲದಿದ್ದ ಕಾರಣ ಅದಕ್ಕೆ ರಾಜೀನಾಮೆ ನೀಡಿ ಸ್ವತಂತ್ರನಾಗಿ ದಖನ್ನಿಗೆ ಕ್ರಿ.ಶ.೧೭೨೪ರಲ್ಲಿ ಹಿಂದಿರುಗಿದನು. ವಾಪಸ್ ಬಂದ್ ಕೆಲವೇ ಸಮಯದಲ್ಲಿ ಮುಂಬಾರಿಜ್ ಖಾನನ್ನು ದಖನ್ನಿನಲ್ಲಿ ಸುಬೇದಾರನಾಗಿ ನೇಮಿಸಿ

ದಕ್ಷಿಣದ ಮೊಗಲ್ ಪಾಂತ್ಯಗಳನ್ನು ಆತನ ಹತೋಟಿಗೆ ನೀಡಿದನು. ನಿಜಾಮನು ಕ್ರಮವಾಗಿ ಮುಂದುವರೆದು ಅಕ್ಟೋಬರ್ ಕ್ರಿ.ಶ. ೧೭೨೪ರಲ್ಲಿ ಹೈದರಾಬಾದ್‌ನ್ನು ತನ್ನ ವಶಕ್ಕೆ ತೆಗೆದುಕೊಂಡು ಅಲ್ಲಿಯೇ ನೆಲೆಸಿದನು. ಇತನಿಗೆ 'ಅಸಫಜಾಹ' ಎಂಬ ಬಿರುದು ನಂತರ ನೀಡಲಾಯಿತು. ಅಸಫಜಾಹ ಕ್ರಿ.ಶ.೧೭೪೮ರಲ್ಲಿ ಮರಣ ಹೊಂದುವ ವೇಳೆಗೆ ದಖನ್ನಿಯಲ್ಲಿ ತನ್ನ ಸಾಮ್ರಾಜ್ಯದ ಆಳ್ವಿಕೆಯನ್ನು ಸುಭದ್ರಗೊಳಿಸಿಕೊಂಡಿದ್ದನು. ಗುಲಬರ್ಗಾ ಜಿಲ್ಲೆಯಲ್ಲಿ ಈ ವೇಳೆಗಾಗಲೇ ಮೂರು ರಾಜಕೀಯ ಶಕ್ತಿಗಳ ಹತೋಟಿಗಳಾದ ನಿಜಾಮನ ಹಿಡಿತದಲ್ಲಿ ಜಿಲ್ಲೆಯ ಅನೇಕ ಭಾಗಗಳಿದ್ದವು. ಅಪರೋಕ್ಷವಾಗಿ ಮರಾಠರಿಗೆ "ಚೌತ್" ಸಲ್ಲಿಸುತ್ತಿದ್ದುದರಿಂದ ನಿಜಾಮನ ಹಿಡಿತದಲ್ಲಿದ್ದ ಭಾಗಗಳು ಹಾಗೂ ಸುರಪುರದ ನಾಯಕರಿಗೆ ಒಳಪಟ್ಟಿದ್ದ ಭಾಗಗಳಿಂದ ಕಂದಾಯ ಶೇಕಡಾ ೧/೧೦ನೇ ಭಾಗವನ್ನು ದಹಿಜಾ ರೂಪದಲ್ಲಿ ಸಲ್ಲಿಸಬೇಕಾದುದು ನಿಯಮವಾಗಿ ಮುಂದುವರೆಯಬೇಕಾಯಿತು. ಆಸಫ್ ಜಾಹನು ಕ್ರಿ.ಶ.೧೭೪೮ರಲ್ಲಿ ನಿಧನನಾದ ಮೇಲೆ ಹೈದರಾಬಾದಿನಲ್ಲಿ ನಾಸಿರ್‌ಜಂಗ್ ಮತ್ತು ಅವನ ಅಕ್ಕನ ಮಗ ಮುಸಾಫಿರ ಜಂಗ್ ಇಬ್ಬರ ನಡುವೆ ಸಿಂಹಾಸನಕ್ಕಾಗಿ ಕಲಹ ಪ್ರಾರಂಭವಾಯಿತು. ಕೊನೆಗೆ ಬ್ರಿಟಿಷ್ ಸೈನ್ಯವು ಬೆಂಬಲ ನೀಡಿದ ಕಾರಣ ನಾಸಿರ್‌ಜಂಗನು ಕ್ರಿ.ಶ.೧೭೫೦ರಲ್ಲಿ ಹೈದರಾಬಾದಿನ ನಿಜಾಮ ಸ್ಥಾನವನ್ನು ಹೊಂದಿದನು.

ನಿಜಾಮನು ಕ್ರಿ.ಶ.೧೭೬೬ರಲ್ಲಿ ಬ್ರಿಟಿಷರಿಗೆ ಸೈನಿಕ ನೆರವನ್ನು ಯಾವ ಸಮಯದಲ್ಲಿಯಾದರೂ ಒದಗಿಸುವುದಾಗಿ ಒಪ್ಪಂದ ಸಹಿ ಹಾಕಿದನು. ಮುಂದೆ ಹೈದರಾಬಾದ್ ನಿಜಾಮನ ಸಂಸ್ಥಾನವು ಬ್ರಿಟಿಷರ ಅಧೀನದಲ್ಲೇ ಮುಂದುವರೆಯುವಂತಾಯಿತು. ನಿಜಾಮ ಅಲಿಯು ಕ್ರಿ.ಶ.೧೮೦೩ರಲ್ಲಿ ನಿಧನನಾಗಲೂ ಅವನ ಮಗನಾದ ಸಿಕೆಂದರ್ ಜಾಹ ನಿಜಾಮ ಪಟ್ಟಕ್ಕೆ ಬಂದನು. ಈತನು ೧೮೨೯ರಲ್ಲಿ ನಿಧನನಾಗಲು ಅವನ ಮಗನಾದ ನಾಸಿರ್ ಉದ್ ದೌಲನು ನಿಜಾಮನ ಪಟ್ಟಕ್ಕೆ ಬಂದನು. ಈತನು ೧೮೫೭ರಲ್ಲಿ ನಿಧನನಾದನು ನಂತರ ಅಫಜಲ್ ಉದ್‌ದೌಲ (೧೮೫೭-೧೮೬೯) ರಾಜಕೀಯ ನೀತಿಯಲ್ಲಿ ತನ್ನ ತಂದೆಯ ಬ್ರಿಟಿಷರ ಅನುಯಾಯಿ ತತ್ವಗಳನ್ನು ಮುಂದುವರೆಸಿದನು. ಕ್ರಿ.ಶ.೧೮೫೭-೫೮ರಲ್ಲಿ ಸಂಭವಿಸಿದ ಮೊದಲನೇ ಸ್ವಾತಂತ್ರ್ಯ ಸಂಗ್ರಾಮದೆದುರು ಬ್ರಿಟಿಷರು ತಲ್ಲಣಿಸುತ್ತಿದ್ದಾಗಲೂ ನಿಜಾಮ ಮತ್ತು ಅವನ ಪ್ರಧಾನ ಸಾಲಾರ್ ಜಂಗ್ ಅವರಿಗೆ ಬೆಂಬಲವಾಗಿ ನಿಂತರು ಮಹಬೂಬ್ ಅಲಿ ಖಾನ್ ಮರಣಾನಂತರ (೧೯೧೧) ಅವರ ಮಗ ಮೀರ್ ಉಸ್ಮಾನ್ ಅಲಿಖಾನ್ ನಿಜಾಮರಾಗಿ ನೇಮಕಗೊಂಡರು ಮೀರ್ ಉಸ್ಮಾನ್ ಅಲ್ಲಿ ಖಾನ್ ಅವರು (೧೯೧೧-೧೯೪೮) ಮೂರನೇ ಸಾಲಾರ ಜಂಗ್ ಕ್ರಿ.ಶ.೧೯೧೪ರಲ್ಲಿ ರಾಜೀನಾಮೆಯಿತ್ತಾಗ ಆಡಳಿತವನ್ನು ಸ್ವತಂತ್ರವಾಗಿ ನೋಡಿಕೊಳ್ಳುವಂತಾಯಿತು.

ಕ್ರಿ.ಶ.೧೯೪೬ರಲ್ಲಿ ಹೊಸ ಸಂವಿಧಾನ ಜಾರಿಗೆ ತಂದ ನಿಜಾಂ ಸರಕಾರ ಕಾಂಗ್ರೆಸ್ಸಿನ ಮೇಲೆ ಹೇರಿದ ಪ್ರತಿಬಂಧವನ್ನು ಏಪ್ರಿಲ್ ೧೯೪೬ರಲ್ಲಿ ಹಿಂತೆಗೆಯಿತು. ಆದರೆ ಆಗ ನಡೆದ ಚುನಾವಣೆಯಲ್ಲಿ ಕಾಂಗ್ರೆಸ್ ಸ್ಪರ್ಧಿಸಲಿಲ್ಲ. ಮಜ್ಲಿಸ್ ಪಕ್ಷದ ಲಾಯಕ್ ಅಲಿ ಮುಖ್ಯಮಂತ್ರಿಯಾದರು. ಆದರೆ ರಜಾಕಾರರ ಪುಂಡಾಟಿಕೆ ಹೆಚ್ಚಿತು. ಹಿಂದೂಗಳ ಕೊಲೆ, ಮನೆಗಳ ಲೂಟಿ ಅಗ್ನಿಸ್ಪರ್ಶ ನಿತ್ಯದ ಮಾತಾಯಿತು.

ಕ್ರಿ.ಶ.೧೯೪೭ರಲ್ಲಿ ಜೂನ್ ೨೪ ಭಾರತದ ಸಂವಿಧಾನ ರಚಿಸುವ ಘಟನಾ ಸಮಿತಿಗೆ ಪ್ರತಿನಿಧಿಗಳನ್ನು ಕಳುಹಿಸುವ ಪತ್ರಕ್ಕೆ ನಿಜಾಮರು ನಕಾರವಿತ್ತರು. ನಿಜಾಮರು ಭಾರತ ಒಕ್ಕೂಟ ಸೇರದೇ ಸ್ವತಂತ್ರರಾಗುವ ವಿಚಾರ ಹೊಂದಿಗೋವೆಯ ಪೋರ್ಚುಗೀಸರನು ಸಂಪರ್ಕಿಸಿ ಶಸ್ತ್ರಾಸ್ತ್ರ ಸಂಗ್ರಹಕ್ಕೆ ತೊಡಗಿದರು.[೩೩]

ಗಡಿಯುದ್ಧಕ್ಕೂ ಸಶಸ್ತ್ರ ತರುಣರ ಶಿಬಿರಗಳು ರಜಾಕರರನ್ನು ಪ್ರತಿಭಟಿಸಲು ಸಿದ್ಧವಾದವು. ಹೈದರಾಬಾದ್ ಗಡಿಯೊಳಗೆ ನುಗ್ಗಿ ರಜಾಕಾರರೊಡನೆ ಹೋರಾಡಿ ಅವರನ್ನು ಕೊಂದು ಶಸ್ತ್ರಾಸ್ತ್ರ ವಶಪಡಿಸಿಕೊಳ್ಳುವುದು ನಿತ್ಯದ ಮಾತಾಯಿತು. ೧೩ ತಿಂಗಳ ನಡೆದ ಈ ಹೋರಾಟದಲ್ಲಿ ಸಂಸ್ಥಾನದ ಒಳಗೂ ಗಡಿಭಾಗದಲ್ಲೂ ಸಾವಿರಾರು ಜನ ಪ್ರಾಣ ನೀಗಿದ್ದರು. ಅನೇಕ ಕುಟುಂಬಗಳೇ ನಿರ್ನಾಮವಾದವು. ಕಡೆಗೆ ಕೇಂದ್ರ ಸರಕಾರವು ಸರ್ದಾರ್ ಪಟೇಲರ ನಿರ್ಣಯದಂತೆ ೧೯೪೮ರ ಸೆಪ್ಟೆಂಬರ್ ೧೩ಕ್ಕೆ ಹೈದರಾಬಾದ್ ಮೇಲೆ ಐದು ದಿಕ್ಕುಗಳಲ್ಲಿ ಸೇನೆ ಕಳುಹಿಸಲು ಸೆಪ್ಟೆಂಬರ್ ೧೭ಕ್ಕೆ ಹೈದರಾಬಾದ ಮುಕ್ತಿಯಾಯಿತು. ಹೈದರಬಾದ್ ಭಾರತದ ಒಕ್ಕೂಟ ಸೇರಲು ನಿಜಾಮರ ಸಹಿ ಹಾಕಿದರು.[೩೪] ಹೈದರಬಾದನಲ್ಲಿ ನಿಜಾಮರ ರಾಜಪ್ರಮುಖರಾಗಿ ಜನಪ್ರಿಯ ಮಂತ್ರಿಮಂಡಲ ಬಂತು. ಆದರೆ ಸಾವಿರಾರು ಸ್ತ್ರೀ-ಪುರುಷರು ಈ ಹೋರಾಟದಲ್ಲಿ ಪ್ರಾಣ ತೆತ್ತರು. ಲಾಯಕ್ ಅಲಿ ಮತ್ತು ಕಾಸಿಂರಜ್ವಿ ಮುಂದೆ ಪಾಕಿಸ್ತಾನಕ್ಕೆ ಪಲಾಯನ ಮಾಡಿದರು.

## ಕೊನೆಟಿಪ್ಪಣಿಗಳು

೦೧. ಪಾಟೀಲ ಎಂ.ಬಿ (ಸಂ)., 'ಕರ್ನಾಟಕ ರಾಜ್ಯ ಗ್ಯಾಸೆಟೀಯರ್ ಗುಲಬರ್ಗಾ ಜಿಲ್ಲೆ', ಪು-೮೦

೦೨. ಅದೇ, ಪು-೧

೦೩. ಪಾಟೀಲ ಎಚ್.ಎಸ್ ಮತ್ತು ಅಲ್ಲಮಪ್ರಭು ಬೆಟ್ಟದೂರ (ಸಂ)., 'ತಿರುಗ್ಗನ್ನಡ ಅಖಿಲ ಭಾರತ ೬೨ನೆಯ ಕನ್ನಡ ಸಾಹಿತ್ಯ ಸಮ್ಮೇಳ ಕೊಪ್ಪಳ', ಪು-೨

೦೪. ಕಲಬುರ್ಗಿ ನಾಡು ಸಾಕ್ಷರ ನಾಡು, ಕಿರು ಯೋಜನಾ ಮಾದರಿ ಕಾರ್ಯಕ್ರಮ ಕೈಪಿಡಿ, ೨೦೦೪-೦೫, ಪು-೧೨

೦೫. ಪಾಟೀಲ್ ಎಚ್.ಎಸ್ ಮತ್ತು ಅಲ್ಲಮಪ್ರಭು ಬೆಟ್ಟದೂರ (ಸಂ)., ಪು-೧೬

೦೬. ಪಾಟೀಲ ಎಂ.ಬಿ., ಪೂರ್ವೋಕ್ತ, ಪು-೩೪

೦೭. ಸೂರ್ಯನಾಥ ಕಾಮತ್, 'ಕರ್ನಾಟಕದ ಸಂಕ್ಷಿಪ್ತ ಇತಿಹಾಸ', ಪು-೧೩

೦೮. ಪಾಟೀಲ ಎಂ.ಬಿ., ಪೂರ್ವೋಕ್ತ, ಪು-೩೫

೦೯. ಸುಂದರ ಅ., 'ಇತಿಹಾಸ ಪೂರ್ವ ಕರ್ನಾಟಕ ಅಥವಾ ಕರ್ನಾಟಕದ ಪ್ರಾಗೈತಿಹಾಸ', ಪು-೮೮

೧೦. ಶಾರದ ಪ್ರಸಾದ್ ಎನ್.ಎಸ್ (ಅನು)., 'ಭಾರತದ ಪ್ರೌಢ ಇತಿಹಾಸ', ಪು-೯೪

೧೧. ರಂಗಸ್ವಾಮಯ್ಯ ಜಿ.ಆರ್., ಕರ್ನಾಟಕದ ಸಂಕ್ಷಿಪ್ತ ಚರಿತೆ, ಪು-೫೯

೧೨. ಷೇಕ್ ಅಲಿ ಬಿ., ಕರ್ನಾಟಕ ಚರಿತ್ರೆ, ಸಂಪುಟ-೧, ಪು-೪೩೫

೧೩. ಪಾಟೀಲ ಎಂ.ಬಿ., ಅದೇ, ಪು-೪೫

೧೪. ಬಸವರಾಜ ಎನ್.ಅಕ್ಕಿ, 'ಕರ್ನಾಟಕದ ಇತಿಹಾಸ ಮತ್ತು ಸಂಸ್ಕೃತಿ', ಪು-೧೧೩

೧೫. ಪಾಟೀಲ ಎಂ.ಬಿ (ಸಂ)., 'ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಗುಲಬರ್ಗಾ ಜಿಲ್ಲೆ', ಪು-೮೮

೧೬. ಅದೇ, ಪು-೫೦

೧೭. ಅದೇ, ಪು-೫೫

೧೮. ಅದೇ, ಪು-೬೧

೧೯. ಷೇಕ್ ಅಲಿ ಬಿ., 'ಕರ್ನಾಟಕ ಚರಿತ್ರೆ', ಸಂಪುಟ-೪, ಪು-೭೦

೨೦. ಸೂರ್ಯನಾಥ ಕಾಮತ್, 'ಕರ್ನಾಟಕ ರಾಜ್ಯ ಗ್ಯಾಸಟಿಯರ್ ಭಾಗ ಒಂದು', ಪು-೨೩೭

೨೧. ಪಾಟೀಲ್ ಎಂ.ಬಿ, ಪೂರ್ವೋಕ್ತ, ಪು-೭೬

೨೨. ಅದೇ, ಪು-೭೨

೨೩. ಸೂರ್ಯನಾಥ ಕಾಮತ್, 'ಕರ್ನಾಟಕ ಸಂಕ್ಷಿಪ್ತ ಇತಿಹಾಸ', ಪು-೨೮೬

೨೪. ಅದೇ, ಪು-೨೮೮

## ಅಧ್ಯಾಯ - ಮೂರು

# ರೈತ ಚಳವಳಿಯ ಚಾರಿತ್ರಿಕ ಹಿನ್ನೆಲೆ

ಕರ್ನಾಟಕದಲ್ಲಿ ಅನಾದಿ ಕಾಲದಿಂದಲೂ ಪ್ರಭುತ್ವ ಮತ್ತು ವ್ಯವಸ್ಥೆಯ ವಿರುದ್ಧ ಸಾಮಾನ್ಯ ಜನರು, ರೈತರು ಚಳವಳಿಗಳನ್ನು ನಡೆಸಿಕೊಂಡು ಬಂದಿದ್ದಾರೆ. ಮೈಸೂರು ಸಂಸ್ಥಾನದ ಒಡೆಯರು ಆಳ್ವಿಕೆಯಲ್ಲೂ ರೈತ ಹೋರಾಟಗಳು ನಡೆದು ಬಂದದ್ದು ಗಮನಾರ್ಹವಾಗಿವೆ. ಅದರಲ್ಲಿ ಚಿಕ್ಕದೇವರಾಜ ಒಡೆಯರ ಕಾಲದಲ್ಲಿ ಅಧಿಕ ತೆರಿಗೆಯಿಂದ ರೊಚ್ಚಿಗೆದ್ದ ರೈತರು, ಜಂಗಮರನ್ನು ಬೆಂಬಲಿಸಿ ದಂಗೆಯೆದ್ದರೂ, ಈ ದಂಗೆಯಲ್ಲಿ ಅನೇಕ ರೈತರು ಪ್ರಾಣಕಳೆದುಕೊಂಡರು. ಮುಂದೆ ಟಿಪ್ಪು ಪೂರ್ಣಯ್ಯನವರ ಆಳ್ವಿಕೆ ಕಾಲದಲ್ಲಿ ರೈತ ಹೋರಾಟಗಳು ನಡೆದದ್ದು ಕಾಣುತ್ತೇವೆ.

೧೮೩೦ರಲ್ಲಿ ಮುಮ್ಮುಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ನಡೆದ ನಗರ ದಂಗೆಯು ಪ್ರಮುಖವಾಗಿದ್ದು, ಇದು ಮೈಸೂರು ಪ್ರಾಂತ್ಯದಲ್ಲಿ ಹೊಸ ಮೈಲುಗಲ್ಲಾಗಿತ್ತು. ಬಿದನೂರಿನ ಜಹಗೀರದಾರ ಅಪ್ಪಣ್ಣನು ಮೈಸೂರ ಖಜಾನೆಗೆ ಕೊಡಬೇಕಾಗಿದ್ದ ತೆರಿಗೆಯನ್ನು ದುರುಪಯೋಗ ಪಡಿಸಿಕೊಂಡು ಕೆಲಸ ಕಳೆದುಕೊಂಡನು. ಇದೇ ವೇಳೆಗೆ ಸಾದರಮಲ್ಲ ಎಂಬುವವನು ಸೆರೆಮನೆಯಿಂದ ಹೊರ ಬಂದು ಬಿದನೂರಿನ ಉತ್ತರ ಅಧಿಕಾರಿಯೆಂದು ಘೋಷಿಸಿಕೊಂಡನು. ಅಲ್ಲದೆ ರೈತರನ್ನು ಎತ್ತಿ ಕಟ್ಟಿ ಅಪ್ಪಣ್ಣನ ಬೆಂಬಲ ಪಡೆದು ಕಂದಾಯ ಮಾಫ್ ಮಾಡುವುದಾಗಿಯು ಹೇಳಿ ದಂಗೆ ನಡೆಸಲು ಪ್ರಯತ್ನಿಸಿದನು. ಬಿದನೂರು ದೊರೆಯ ಮುದ್ರೆಯನ್ನು, ಅಪಹರಿಸಿ "ಬೂದಿ ಬಸಪ್ಪ ನಗರ ಖಾವಿಂದ" ಎಂದು ಮುದ್ರೆ ಹಾಕಿ ರೈತರನ್ನು ನಂಬಿಸಿದನು. ಕೊನೆಗೆ ಬಿದನೂರಿನಾದ್ಯಂತ ದಂಗೆಗಳನ್ನು ನಡೆಸಿದನು. ಇದನ್ನು ಒಡೆಯರಿಗೆ ಹತ್ತಿಕ್ಕಲು ಸಾಧ್ಯವಾಗದೇ ಅತೃಪ್ತಿಯನ್ನು ಸರ್ಕಾರ ಅಥವಾ ರಾಜರ ಗಮನಕ್ಕೆ ತರದೆ ರೈತರ ಸುಲಿಗೆ ಮಾಡಿದ್ದು ಹಾಗೂ ಅವರನ್ನು ದಂಗೆಗೆ ಪ್ರಚೋದಿಸಿದ ಇಬ್ಬದಿ ನಡಾವಳಿ ರೈತ ಚಳವಳಿಗೆ ದಾರಿ ಮಾಡಿ ಕೊಟ್ಟಿತು. ಕೊನೆಗೆ ರೈತ ಚಳವಳಿಯ ಕಾರಣ ತಿಳಿದು ಪರಿಹಾರ ಒದಗಿಸಿದರು. ಹೀಗಾಗಿ ನಗರ ಬಂಡಾಯ ರೈತರ ಸಮಗ್ರ ವ್ಯಾಪಕ ಬಂಡಾಯ ಮುಖಿಯಾಗಿದ್ದರೂ ನಾಯಕತ್ವದ ಸ್ವಾರ್ಥ ಹಾಗೂ ಅಸಮರ್ಥನೆ ಅದಕ್ಕೆ ತಾತ್ವಿಕ, ಗೌರವವನ್ನು ತಂದು ಕೊಡಲಿಲ್ಲ.

ಆದರೂ ರೈತರ ಚಳವಳಿ ತನ್ನ ಪರಿಹಾರವನ್ನು ರಾಜರ ಮೂಲಕ ಕಂಡುಕೊಂಡಿದ್ದು. ಸರ್ಕಾರ ಹಾಗೂ ಜನಪ್ರತಿನಿಧಿಗಳ ಸಾಂಕೇತಿಕ ಸಂವಾದದ ಫಲಶೃತಿಯೇ ಆಗಿತ್ತು.[೧]

ನಗರ ದಂಗೆಯಿಂದ ಸ್ಫೂರ್ತಿ ಪಡೆದ ಸಂಸ್ಥಾನದ ರೈತರುಗಳೂ ಕೂಡ ತಮ್ಮ ಶೋಷಣೆ ವಿರುದ್ಧ ಸಿಡಿದೆದ್ದರು. ಸಂಗೊಳ್ಳಿ ರಾಯಣ್ಣನ ಬಂಡಾಯ, ಕೊಡಗು ಮತ್ತು ಅಮರಸುಳ್ಯ ಬಂಡಾಯ ಅಪರಂಪರ ಕಲ್ಯಾಣಸ್ವಾಮಿ, ಪುಟ್ಟ ಬಸಪ್ಪನ ನೇತೃತ್ವದ ಬಂಡಾಯ ಕನ್ನಡ ಜಿಲ್ಲೆಯ ಜಂಗಲ್ ಸವಲತ್ತು ಹೋರಾಟ, ಉತ್ತರ ಕನ್ನಡ ಜಿಲ್ಲೆಯ ಜಂಗಲ್ ಸವಲತ್ತು ಹೋರಾಟ, ಉತ್ತರ ಕನ್ನಡ ಜಿಲ್ಲೆಯ ವನದುಃಖ ವಿರೋಧಿ ಚಳವಳಿ ಪರಂಪರೆ ಹುಲಬನ್ನಿ ಕರನಿರಾಕರಣ ಚಳವಳಿ, ಶಿರಸಿ, ಸಿದ್ಧಾಪುರ, ತಾಲ್ಲೂಕಿನ ರೈತರ ಕರನಿರಾಕರಣೆ, ಹಿರೇಕೆರೂರಿನ ಕರಾನಿಕಾರಣೆ ಚಳವಳಿಗಳು ನಡೆದವು ಈ ಚಳವಳಿಗಳು ಕ್ರಮೇಣ ರಾಜಕೀಯ ಹಿತಾಸಕ್ತಿಯ ರೂಪ ಪಡೆದುಕೊಂಡವು.

ವ್ಯಾಪಾರದ ಮುಗ್ಗಟ್ಟು, ಧಾರಣೆ ವಾಸಿ ಕೂಲಿ, ಸಂಬಳ, ಸೌಕರ್ಯಗಳು ಬಡರೈತರಿಗೆ ಕಷ್ಟವಾಗಿತ್ತು. ಸಾಗುವಳಿಯಿಂದ ಉತ್ಪತ್ತಿಯ ಮೊಬಲಗಿನಲ್ಲಿ ಕಂದಾಯ ಕೊಟ್ಟು ಕೂಲಿ ಸಂಬಳ ನೀಡಿ ಸಾಗುವಳಿ ಖರ್ಚು ಕಳೆದರು. ಜೀವನಕ್ಕೆ ಏನು ಉಳಿಯುತ್ತಿರಲಿಲ್ಲ. ಕೃಷಿ ಅಷ್ಟು ಹೀನ ಸ್ಥಿತಿಗೆ ತಲುಪುತ್ತದೆ. ರೈತರ ಈ ಕುಂದು ಕೊರತೆಗಳನ್ನು ಸರ್ಕಾರಕ್ಕೆ ತಿಳಿಸಿಕೊಟ್ಟು ಕಂದಾಯ ಕಡಿಮೆ ಮಾಡುವುದು ಅವಶ್ಯಕ ಎಂದು ಮನವರಿಕೆ ಮಾಡಬೇಕು. ರಿಯಾಯ್ತಿ ಸೌಕರ್ಯ ಪಡೆಯುವುದು ಅಗತ್ಯವಾಗಿತ್ತು. ಈ ಕಾರಣಕ್ಕೆ ೧೯೩೧ ಏಪ್ರಿಲ್ ೪ರಂದು ಜಿಲ್ಲೆಯ ಎಲ್ಲಾ ರೈತರು ಮತ್ತು ಜಮೀನ್ದಾರರ ಸಮ್ಮೇಳನವನ್ನು ಏರ್ಪಡಿಸಲು ತೀರ್ಮಾನಿಸಲಾಯಿತು. ಅಂದರೆ ೧೯೩೦ರ ದಶಕಗಳಲ್ಲಿ ರೈತರ ದೂರು ದುಮ್ಮಾನಗಳನ್ನು ಸಂಘಟನಾತ್ಮಕವಾಗಿ ಕ್ರಮಬದ್ಧವಾಗಿ ಸರ್ಕಾರಕ್ಕೆ ಸಲ್ಲಿಸಿ ಪರಿಹಾರ ಪಡೆಯಲು ಹೋರಾಟ ನಡೆಸಿದ ಚಿತ್ರಣ ಕಂಡು ಬರುತ್ತದೆ.[೨]

ಈ ಹಿನ್ನೆಲೆಯಲ್ಲಿ ೧೯೩೧ರ ನವೆಂಬರ್ ೨೬ರಂದು ಕಾನಕಾನಹಳ್ಳಿಯಲ್ಲಿ ಸಾವಿರಾರು ಮಂದಿ ರೈತರು ಸಭೆ ಸೇರಿದರು. ಅನೇಕ ರೈತ ಮುಖಂಡರು. ಸಭೆಯಲ್ಲಿ ಭಾಗವಹಿಸಿದರು. ಕಂದಾಯ ರಿಯಾಯಿತಿ, ಬಾಲತೆರಿಗೆ, ಹುಲ್ಲುಗಾವಲು ತೆರಿಗೆ, ಕಟ್ಟಿಗೆ ಸುಂಕ, ಎತ್ತುವ ಜಮೀನ ಜುಲ್ಮಾನೆ ದ್ರವ್ಯ ಮುಂತಾದವುಗಳಿಗೆ ಪರಿಹಾರ ಸೌಕರ್ಯ ಇತ್ಯಾದಿಗಳು ಕುರಿತು ಗೊತ್ತುವಳಿಯನ್ನು ಮಾಡಲಾಯಿತು. ತಾಲೂಕಿನಲ್ಲಿ ೫-೧೦ ಹಳ್ಳಿಗಳನ್ನು ಬಿಟ್ಟರೆ ಉಳಿದ ಹಳ್ಳಿಗಳಲ್ಲಿ ಬೆಳೆಯಾಗಿಲ್ಲ. ದನಕರುಗಳ ವ್ಯಾಪಾರವಿಲ್ಲ, ಮೇವಿಗೆ ಬರ ಬಂದಿದೆ, ತಾಲ್ಲೂಕು ಎಲ್ಲಾ ಕಾಡು ಪ್ರದೇಶ ತರೀ ವ್ಯವಸಾಯವೇ ಇಲ್ಲ ಅಂದರೆ ಮಳೆ ನೀರೇ ವ್ಯವಸಾಯ ಆಧಾರ ಇಲ್ಲದಿದ್ದರೆ ಕೃಷಿ ಕಾರ್ಯವೆಲ್ಲಾ ಸ್ಥಗಿತಗೊಳ್ಳುವ ಸನ್ನಿವೇಶ ಎದುರಾಗುತ್ತದೆ. ರೈತರು ಹಸಿವಿನಿಂದ ನರಳುತ್ತಿದ್ದಾರೆ. ಆದರೂ ಕಂದಾಯ ದರ ಹೆಚ್ಚಾಗಿರುವುದರಿಂದ ಸರ್ಕಾರ ಅದನ್ನು ಕಡಿಮೆ ಮಾಡಬೇಕೆಂದು ಪ್ರಜಾಪ್ರತಿನಿಧಿ ಸಭೆಯಲ್ಲಿ ಚರ್ಚಿಸಿ ಸರ್ಕಾರದ ಗಮನಕ್ಕೆ ತರುವ ಪ್ರಯತ್ನ ಮಾಡಲಾಯಿತು.

ಸ್ವಾತಂತ್ರ್ಯ ಪೂರ್ವದಲ್ಲಿ ನಡೆದ ಕರ್ನಾಟಕದ ರೈತ ಹೋರಾಟಗಳು ತಮಿಳುನಾಡಿನ ರೈತ ಹೋರಾಟಗಳಿಂದ ತಾತ್ವಿಕವಾಗಿ, ತಾಂತ್ರಿಕವಾಗಿ, ಪ್ರಭಾವಿತವಾಗಿವೆ. ಭಾರತೀಯ ಶಕ್ತಿಕೂಟದಲ್ಲಿ ರೈತನ ಶಕ್ತಿ ಸ್ಥಾನವನ್ನು ಗಮನಿಸಿ ವರ್ಗದ ಶೋಷಣೆ ವಿರುದ್ಧ, ಸಂಘಟಿತರಾಗಿ ನಡೆಸುವ ಪ್ರಗತಿಪರ ಹೋರಾಟದ ನೆಲೆಯೇ ರೈತ ಶಕ್ತಿಯ ನೆಲೆ ಎಂದು ಗುರುತಿಸಿರುತ್ತದೆ.[3] ಇಲ್ಲಿ ಜಾತಿ ವ್ಯವಸ್ಥೆಯ ಪರಯರಾಗತ ಕಾರಣಗಳು, ಆರ್ಥಿಕ ಕಾರಣ, ಬಡತನ, ಅವಿದ್ಯೆ, ಅಜ್ಞಾನ ಇತ್ಯಾದಿ ಕಾರಣಗಳು ಸಾಮಾಜಿಕ ನೆಲೆಯಲ್ಲಿ ಕಾಣುತ್ತವೆ. ಇದೆಲ್ಲ ಆಧುನಿಕ ಪರಿಕಲ್ಪನೆಯಲ್ಲಿ ವಿಸ್ತಾರಗೊಂಡ ರೈತರ ಚಳವಳಿಯ ತಾತ್ವಿಕ ನೆಲೆಗಳಾಗಿವೆ. ಎಡ ಪಂಥೀಯ ನಿಲುವಿನಲ್ಲೂ ಈ ಚಳವಳಿಗಳನ್ನು ವಿಶ್ಲೇಷಿಸಿರುವುದುಂಟು. ಆದರೆ ಸಾಂಸ್ಕೃತಿಕ ನೆಲೆಯಲ್ಲಿ ಪ್ರಜಾ ಪ್ರತಿನಿಧಿಗಳ ಸಂವಾದದ ನೆಲೆಯಲ್ಲಿ ವಿಶ್ಲೇಷಣೆ ಗಾಢವಾಗಿ ನಡೆದಿರುವುದು ಕಾಣಬರುವುದಿಲ್ಲ. ೧೯-೨೦ನೇ ಶತಮಾನದ ವಿಶ್ಲೇಷಣೆಗಷ್ಟೇ ಸೀಮಿತ ಮಾಡಿಕೊಂಡರೆ ಹಿಂದೆ ರಾಜರ ಕಾಲದಲ್ಲಿ ನಡೆದ ರೈತ ಪ್ರತಿಭಟನೆಯ ಮೌಲ್ಯಕ್ಕೆ ಬೆಲೆ ಸಿಗದಂತಾಗುತ್ತದೆ. ಯಾವುದೇ ಒಂದು ಚಳವಳಿಗೆ ಹೋರಾಟಗಳ ಪ್ರಜ್ಞಾ, ಪರಂಪರೆಯ ಮೊತ್ತವೂ ನೆಲೆಗಟ್ಟಾಗಿರುತ್ತದೆ. ಹೊಸರೂಪ, ಹೊಸ ಸೃಷ್ಟಿ ಎಂದುಕೊಂಡರೂ ಹಿನ್ನೆಲೆಯ ಚಳವಳಿಗಳನ್ನಷ್ಟೇ ವೈಭವೀಕರಿಸಿ ಸುದ್ದಿ ಮಾಡಿದರೆ ತಾರತಮ್ಯ ಭಾವನೆ ಮಾಡಿದಂತೆ ಆಗುತ್ತದೆ. ಅದು ಸಮಸ್ತ ಜನವರ್ಗದ ಸಮನ್ವಯ ನೆಲೆಯಾಗಿದೆ. ಪಂಥಿಯ ದೋಷವನ್ನು ಹೊರಬೇಕಾಗುತ್ತದೆ. ಅಲ್ಲಿಗೆ ಮಾನವ ಕುಲ ಅಥವಾ ಮನುಜ ಹಿತವೇ ಧರ್ಮ ಎಂಬ ಮಾತಿಗೆ ಆಶಯಕ್ಕೆ ನೆಲೆ ಎಲ್ಲಿ ಒದಗೀತು? ಅಂತಾಗಿ ಯಾವ ಸ್ವರೂಪದ ಯಾವುದೇ ಮಟ್ಟದ ಪ್ರತಿಭಟನೆ ಆಗಿರಲಿ ಹಿಂದಿನವುಗಳನ್ನು ಗಮನಿಸಬೇಕಾಗುತ್ತದೆ. ಮುಂದಿನ ತಲೆಮಾರಿಗೆ ಅವು ನೀಡಿದ ಸಂಕೇತಗಳನ್ನು ಗ್ರಹಿಸಬೇಕು. ಅಂದಿನ ಒಡೆಯ ರೈತ, ಇಂದಿನ ಒಡೆಯ ರೈತ ಕುರಿತು ಪರಿಕಲ್ಪನೆಗಳನ್ನು ಆಯಾ ಕಾಲದ ಸಾಂಸ್ಕೃತಿಕ ಜಾಯಮಾನದ ಮೂಲಕ ಗ್ರಹಿಸಬೇಕಾಗುತ್ತದೆ.[4]

ಜಗತ್ತಿನಲ್ಲಿ ಮಾರ್ಕ್ಸ್-ಲೆನಿನ್ ಮಾವೋ ಸಿದ್ಧಾಂತಗಳ ಬೆಳಕಿನಲ್ಲಿ ರೈತ ಕಾರ್ಮಿಕರು ಹಾಗೂ ಭೂ ಮಾಲೀಕರು ಇವರ ನಡುವಣ ಸಂಘರ್ಷಗಳು "ಬಂಡಾಯ", "ಕ್ರಾಂತಿ" ಎಂಬ ರೂಪಗಳಲ್ಲಿ ವ್ಯಕ್ತಗೊಂಡವು. ಭಾರತದಲ್ಲೂ ಈ ಸಿದ್ಧಾಂತಗಳ ಪರ್ಯಾಯ ಅರ್ಥದ ರೂಪದಲ್ಲಿ ಕಾಣಿಸಿಕೊಂಡಿದ್ದುಂಟು. ಭಾರತೀಯ ರೈತ ಹೋರಾಟಗಳ ಮಧ್ಯಯುಗೋತ್ತರದ ಕೆಲ ಉದಾಹರಣೆಗಳನ್ನು ಗಮನಿಸಿದರೆ, ಕರ್ನಾಟಕ ರೈತ ಹೋರಾಟಗಳ ಹಾಗೂ ಜನಪ್ರತಿನಿಧಿ ಶಾಸಕರ ಆಡಳಿತಸ್ಥರ ನಡುವಣ ಕ್ರಿಯೆ ಪ್ರತಿಕ್ರಿಯೆ, ಪರಿಹಾರಗಳ ಅರ್ಥೈಸುವಿಕೆಗೆ ಸಹಕಾರಿ ಆಗುತ್ತದೆ. ಈ ರೈತ ಚಳವಳಿಗೆ ಜಾತಿ ಒಕ್ಕೂಟದ ಹಿನ್ನೆಲೆ, ಧಾರ್ಮಿಕ ಪಂಥಗಳ ನೆಲೆಗಳೂ ಕಾಣಬರುತ್ತದೆ. ಅವುಗಳಲ್ಲಿ ಕೆಲವು ಆರ್ಥಿಕ ಕಾರಣಗಳಿಗಾಗಿ, ಸ್ವಾತಂತ್ರ್ಯ ಹೋರಾಟ ನಡೆದರೆ ಕೆಲವು ಶೋಷಣೆಯ ವಿಪರೀತದ ಪರಿಣಾಮದ್ದಾಗಿವೆ. ಇನ್ನೂ ಕೆಲವು ಭೂ ಮಾಲೀಕ ವರ್ಗದ ಅತಿ ಲಾಭ ಕೋರತನ ಸವಲತ್ತಿನ ದುರುಪಯೋಗ, ಅಮಾನವೀಯ ಭೋಗಗಳ

ಕಾರಣಗಳಿಂದಾಗಿವೆ. ಮತ್ತೆ ಕೆಲವು ಸಾಂಸ್ಕೃತಿಕ ವೈರುಧ್ಯಗಳಿಂದಾಗಿವೆ. ಅನುಕೂಲಸ್ಥ ರೈತರಾಗಲಿ, ಸಾಮಾನ್ಯ ಕೃಷಿ ಕೂಲಿಗಾರರಾಗಲಿ, ವರ್ಗ ಪ್ರಜ್ಞೆಯ ನೆಲೆಯ ಕ್ರಾಂತಿ ಸಾಧಕರೆಲ್ಲ ಮಧ್ಯಮ ವರ್ಗದ ರೈತರ ಅವಲಂಬಿತರಾಗದ ಕಾರಣ ಧಣಿ ಜನರ ಎದುರಾಗಿ ನಿಲ್ಲಬಲ್ಲರು. ಆದರೆ ಭಾರತೀಯ ಜಾತಿ, ಪದ್ಧತಿ ಧಾರ್ಮಿಕ ಪ್ರಭಾವ, ನೈತಿಕ ವಿಧೇಯತೆಯು ಕಾರಣ ಹಾಗೂ ತಮಗೆ ಅನ್ಯಾಯದ ತೀರ ಮೊನಚಾದ ಹೊರತು, ಶೋಷಣೆ ವಿರುದ್ಧ ರೈತರು ದಂಗೆ ಎದ್ದಿರುವ ಸಂದರ್ಭಗಳೂ ಇವೆ. ಕೊನೆಯ ಗಳಿಗೆಯವರೆಗೂ ಕಾದು ನೋಡುವ ಸಂಯಮವು ಇವರದು." ಪ್ರಾಂಯು ಫೆನೊನನ್ನು ವಸಾಹತು ದೇಶಗಳಲ್ಲಿ ಕ್ರಾಂತಿಗೆ ಸಾಧ್ಯತೆಗೊಳಿಸುವವರು ರೈತರು ಮಾತ್ರ ಅವರೇ ಅದರ ರೂವಾರಿಗಳು ಎಂದು ಹೇಳಿದನು. ಭಾರತ ವಸಹಾತು ರಾಷ್ಟ್ರವಾಗಿ ಇಂಥ ಸಾಧ್ಯಗಳನ್ನು ಹೊಂದಿತ್ತು. ನಿಜ ಆದರೆ ಇದು ಹೆಚ್ಚು ಅಭಿವ್ಯಕ್ತವಾದದ್ದು. ಬ್ರಿಟಿಷ್ ಆಳ್ವಿಕೆ ಹಾಗೂ ನಂತರ ಕಾಲದಲ್ಲಿ ಎಂಬುದು ಅಷ್ಟೇ ಸತ್ಯವಾದುದು.

ಬುದ್ಧ, ಬಸವ, ಕಾರ್ಲ್‌ಮಾರ್ಕ್ಸ್, ಗಾಂಧಿ ಹಾಗೂ ಲೋಹಿಯಾ ಅಂಥವರ ರೈತರ ಉದ್ಧಾರಕ್ಕಾಗಿ ಹಾಕಿಕೊಟ್ಟ ತತ್ವಗಳನ್ನು ರೈತ ಸಂಘವು ಮುಂದುವರಿಸಿಕೊಂಡು ಬಂದಿರುವುದು, ಗಮನಾರ್ಹವಾಗಿದೆ. "ಬುದ್ಧ ಅತ್ತಾಹಿ ಅತ್ತನೋ ನಾಥೋ, ಅತ್ತಾಹಿ ಆತನೋ ಗತಿ," "ನಿನಗೆ ನೀನೇ ಒಡೆಯ ನಿನಗೇ ನೀನೇ ಗತಿ" ಎಂದು ಘನತೆ, ಆತ್ಮಗೌರವದಲ್ಲಿ ಎಚ್ಚರಿಸಿದನು. ನಂತರ ಬಸವಣ್ಣ 'ಕಾಯಕವೇ ಕೈಲಾಸ'ವೆಂದು ಈ ನಾಡನ್ನು ಮತ್ತೊಮ್ಮೆ ಘನತೆ, ಸ್ವಾಭಿಮಾನಗಳ ಕಾಯಕದಲ್ಲಿ ಎಚ್ಚರಿಸಿದರೆ, ೨೦ನೇ ಶತಮಾನದಲ್ಲಿ ಪೆರಿಯಾರರು 'ಸೂಯಮರಿಯಾದೈ' ಅಂದ ಸ್ವ-ಮರ್ಯಾದೆ, ಸ್ವಾಭಿಮಾನವೆನ್ನುವ ಮಂತ್ರವನ್ನು ತಮಿಳರಿಗಿತ್ತನು. ಈ ಮಾದರಿಯಲ್ಲಿಯೇ ಕನ್ನಡ ನಾಡಿನ ರೈತ ಕೋಡಿಗೆ ಹಸಿರು ರುಮಾಲಿನ ಸ್ವಾಭಿಮಾನದ ದೀಕ್ಷೆಯನ್ನು ಬಾರುಕೋಲಿನ ಆತ್ಮರಕ್ಷೆಯನ್ನು ನಾಯಕದ ನಿಲುವಿನಲ್ಲಿ ನಿಲ್ಲುವಂತೆ, ಮಾಡಿದವರು, ರೈತ ಸಂಘದವರು, ಅವರು ಮಾರ್ಕ್ಸ್‌ವಾದದ ವರ್ಗ ಸಂಘರ್ಷದ ಮಾದರಿಯಲ್ಲಿಯೋ ರೈತ ವರ್ಗಕ್ಕಾಗಿ ವರ್ಗ ಪ್ರಜ್ಞೆಯನ್ನು, ವೈಚಾರಿಕ ಚಿಂತನೆಯನ್ನು ಹಾಗೂ ಹೋರಾಟಗಳನ್ನು ರೈತ ಸಂಘಟನೆಯ ರೂಪಿಸಿವೆ. ಇಂದಿಗೂ ಕೂಡ ರೈತ ಸಂಘಗಳು ಈ ತತ್ವಗಳ ಮಾರ್ಗದಲ್ಲಿ ಕ್ರಿಯಾಶೀಲವಾಗಿದೆ. ರೈತರಿಗೆ ಪಂಪ್‌ಸೆಟ್ ತೆರಿಗೆ ಕಟ್ಟಬೇಡಿ, ವಿದ್ಯುಚ್ಛಕ್ತಿ ಬಿಲ್ ಕಟ್ಟಬೇಡಿ, ಎಂದು ರೈತ ಸಂಘಟನೆ ಕಾಡುತ್ತಿದ್ದ ಕೆರೆ ಹಾಗೂ ರೂಪಿಸುತ್ತಿದ ಚಳವಳಿಗಳು ಸ್ವಾತಂತ್ರ್ಯ ಪೂರ್ವದಲ್ಲಿ ಗಾಂಧಿಯವರು ಕರ ನಿರಾಕರಣೆ ಚಳವಳಿಯನ್ನು ಸ್ವಾತಂತ್ರ್ಯೋತ್ತರದಲ್ಲಿ ಮತ್ತೊಮ್ಮೆ ರೂಪಿಸಿದಂತ್ತಿದ್ದವು. ಮಾರ್ಕ್ಸ್ ಅವರ ತತ್ವ ಸಿದ್ಧಾಂತಗಳಿಂದ ಸಮಾಜವಾದಿ ಹೆಜ್ಜೆಗಳನ್ನು ಸಮಾಜವಾದಿ ಹಾದಿಯಲ್ಲೇ ಮುಂದೆ. ತೆಗೆದುಕೊಂಡು ಹೋಗಬೇಕು ಅಂದರೆ ಮೊದಲನೆಯದು ಹೋರಾಟ, ಎರಡನೆಯದು, ವೈಚಾರಿಕ ಸ್ಪಷ್ಟತೆ, ಮೂರನೆಯದು ಆಗುರಿಯನ್ನು ಸಾಧಿಸುವಂಥದು ಇದಕ್ಕೆ ಪೂರಕವಾದ ಕಾರ್ಯಗಳನ್ನು ರೈತ ಹೋರಾಟಗಾರರು ಮಾಡುತ್ತಿದ್ದರು.

ರೈತರಲ್ಲಿ ಸ್ವಾಭಿಮಾನ ಜಾಗೃತಗೊಂಡು ಶೋಷಣೆಯ ವಿರುದ್ಧ ಹೋರಾಟ ಮಾಡುವ ಮೂಲಕ ಸಮಾನತೆಯನ್ನು ಪರಿವರ್ತನೆಯನ್ನು ತಂದು ಕೊಳ್ಳುತ್ತಾರೆ ಎಂಬುದು ರೈತ ಸಂಘದ ತತ್ವ ಸಿದ್ಧಾಂತಗಳಿಂದ ತಿಳಿದು ಬರುತ್ತದೆ.[೬]

ಕರ್ನಾಟಕ ರಾಜ್ಯ ರೈತ ಸಂಘದ ಪ್ರಮುಖ ಉದ್ದೇಶವೆಂದರೆ ರೈತ ವರ್ಗದವರ ಸಂಪೂರ್ಣ ಅಭಿವೃದ್ಧಿಗೆ ಶ್ರಮಿಸುವುದು. ರೈತ ಸಂಘವನ್ನು ಒಂದು ಬೇಡಿಕೆಯ ಸಂಘವನ್ನಾಗಿ ರೂಪಿಸದೇ. ಇಡೀ ಸಮಾಜದ ಸಮಗ್ರ ಬದಲಾವಣೆಗಾಗಿ ದುಡಿಯಲು ರೂಪಿಸಿದರು. ರೈತರು ಆರ್ಥಿಕವಾಗಿ, ರಾಜಕೀಯವಾಗಿ ಮತ್ತು ಸಾಮಾಜಿಕವಾಗಿ ಸಮಾನತೆಯನ್ನು ಗಳಿಸಬೇಕೆಂದು ರೈತ ಸಂಘವು, ಅದು ಸಂಘಟನೆಯನ್ನು ಕಟ್ಟಿ ಬೆಳೆಸಿದವು. ರೈತರು ಯಾರಿಗೂ ಹೆದರದೆ ಬಾಗದೆ ಯಾವತ್ತಿಗೂ ಸ್ವಾಭಿಮಾನದ ಉಸಿರಾಡುತ್ತಾ ಅಧಿಕಾರಿ ವರ್ಗದವರ ಶೋಷಣೆಯ ವಿರುದ್ಧ ಸೆಟೆದು ನಿಲ್ಲುವಂತೆ ಪ್ರೇರಣೆ ನೀಡಿದರು ಎಂದರೆ ತಪ್ಪಾಗಲಾರದು. ರೈತ ಸಂಘದಲ್ಲಿ ಎಲ್ಲರೂ ಸಮಾನರು. ಶ್ರೀಮಂತ-ಬಡವ, ಮೇಲು-ಕೀಳು ಎಂಬ ಭಾವನೆ ಬರಬಾರದು. ಸಂಘಟನೆಯಲ್ಲಿ ಬಲವಿದೆ ಎಂದು ತೋರಿಸುವುದು. ಸಂಘಟನೆಯಲ್ಲಿ ಯಾರೂ ದೊಡ್ಡವರಲ್ಲ, ಸಿದ್ಧಾಂತವೇ ದೊಡ್ಡದು. ಎಲ್ಲರೂ ಸಮಾನತೆಯ ಆಧಾರದ ಮೇಲೆ ದುಡಿಯಬೇಕು ಎಂಬ ತತ್ವ ಸಿದ್ಧಾಂತಗಳನ್ನು ರೂಪಿಸಿಕೊಂಡಿದ್ದರು.

## ರೈತ ಎಂದರೆ ಯಾರು?

ಕೃಷಿಯೇ ಪ್ರಧಾನವಾಗಿರುವ ನಮ್ಮ ದೇಶದಲ್ಲಿ ರೈತರೆಂದರೆ ಯಾರು ಎಂಬ ಬಗೆಗೆ ಚರ್ಚೆ ನಡೆದಿರುವುದು ಒಳ್ಳೇ ಕುತೂಹಲದ ವಿಷಯ. ರೈತ ಜನರ ಬಗೆಗೂ ಬಹುಶಃ ಆ ರೀತಿಯ ವಿವರಣೆಗೆ ನಾವು ಬರುತ್ತಿದ್ದೇವೆ. ಯಾರು ರೈತರಲ್ಲ ಎಂದು ಸುಲಭವಾಗಿ ಹೇಳಿ ಬಿಡಬಹುದು. ಭೂಮಿಯ ಕಂದಾಯ, ಗೇಣಿ, ಬಾಡಿಗೆ ಮತ್ತು ಬಾಬುಗಳನ್ನು ಪಡೆಯುವ ಭೂ ಮಾಲಿಕರು ರೈತರಲ್ಲ, ಬಡ್ಡಿ ವ್ಯವಹಾರದಿಂದ ಜೀವಿಸುವ ಸಾಹುಕಾರರು ರೈತರಲ್ಲ. ರೈತರ ಬೆಳೆಗಳನ್ನು ಪೇಟೆಯ ಮಾರುಕಟ್ಟೆಗೆ ಮಾರಿ ಜೀವಿಸುವವರ ಅಥವಾ ಕಾರ್ಖಾನೆ ನಡೆಸುವವರು ರೈತರಲ್ಲ. ಈ ಜನರು ಹೊಂದಿರುವ ಭೂಮಿ ಅಥವಾ ಬಂಡವಾಳ ರೈತರಿಗೆ ಬೇಕು. ಆದರೆ ಇವರೆಲ್ಲ ರೈತರಲ್ಲ; ಇವರು ಭೂಮಾಲಿಕರು, ವ್ಯಾಪಾರಿಗಳು, ಮತ್ತೇನೋ ಇರಬಹುದು. ಗ್ರಾಮದಲ್ಲಿರುವ ಇನ್ನೊಂದು ವರ್ಗದವರೂ ಕೃಷಿ ಮಾಡುವುದಿಲ್ಲ. ಅವರು ಬಂಡವಾಳ ಹೂಡಿ ವಾಣಿಜ್ಯ ಬೆಳೆ ತೆಗೆದುಕೊಳ್ಳುತ್ತಾರೆ. ಇವರನ್ನು ಸಹ ರೈತ ವರ್ಗಕ್ಕೆ ಸೇರಿಸುವುದಿಲ್ಲ. ಮಾರ್ಕ್ಸ್‌ವಾದಿಗಳ ಭಾಷೆಯಲ್ಲಿ ಈ ವರ್ಗಗಳನ್ನು ಬೂರ್ಜ್ವಾ ಎಂದು ಕರೆಯಬಹುದು.[೮]

## ರೈತ ಎಂದರೆ, ಅದರ ಅರ್ಥ ಹೀಗಿದೆ

ರೈತ, ರೈಹಿತ ಆರಂಭ ಮಾಡುವವನು ಒಕ್ಕಲಿಗ ವ್ಯವಸಾಯಗಾರ ಸರಕಾರಕ್ಕೆ ರುಜು ಇಲ್ಲದೆ ರೈತನಾಗಬಾರದು ಅದೆಂತೆಂದೊಡೆ ಇಪ್ಪುಳ್ಳಾತನೇ ಪಾಚ್ಛಾರೈತ, ರೈತರು ಯಲ್ಲಾ ಬಿತ್ತಿ ಬೆಳೆದಾ ಧಾನ್ಯ. ರೈತ [←ಅರ ರಈಯತ್ ಹಿಂ.ರಯ್ಯತ್, ರೈಯತ್ ಮರಾ ರಯತ್, ರಯ್ಯತ್; ರೈಯತ್/ಇಂ.Ryot][೯]

'ರೈತಾಪಿ' (ನಾ) ಆರಂಭ; ಬೇಸಾಯ: ಬೇಸಾಯು 'ವ್ಯವಸಾಯ' ನೋ ಬೇಸಾಯಗಾರ (ನಾ) ವ್ಯವಸಾಯವನ್ನು ಮಾಡುವವನು ರೈತಃ ಒಕ್ಕಲಿಗ ಅರಸುಕುದವನಿಗೆ ಬೇಸಾಯಗಾರನ ಹಣ್ಣನು ತರುವುದೇ? ಆ ಊರಿನ ಮುಳ್ಳಿನ ಮನೆಯೋ ತನ್ನ ಮೂರು ಲೋಕಗಳೆಂದು ತಿಳಿದುಕೊಂಡಿದ್ದ ಕೊರಗು ಎಂಬ ಬೇಸಾಯಗಾರನಿದ್ದನು.[೧೦]

ಹಾಗಾದರೆ ರೈತರೆಂದರೆ ಯಾರು ತೀರ ಸಂಕುಚಿತ ಅರ್ಥದಲ್ಲಿ ರೈತರೆಂದರೆ ತಾವೇ ಪ್ರತ್ಯಕ್ಷವಾಗಿ ಬೇಸಾಯದಲ್ಲಿ ತೊಡಗಿರುವವರು. ಇವರಲ್ಲಿ ಚಿಕ್ಕ ಹಿಡುವಳಿ ಹೊಂದಿದ ಬೇಸಾಯಗಾರರೂ ಸ್ವತಂತ್ರ ಹೊಲವುಳ್ಳ, ಖಾತೆ ಮಂಜೂರಾತಿ ಇರುವ ಭೂಮಿ ಒಡೆಯನಾಗಿ ಉಳುಮೆ ಮಾಡುವಾತ ರಾಜಾರೈತ, ಭೂಮಾಲೀಕರು, ಭೂಕಂದಾಯ ತರುವ ಗೇಣಿಫಸಲು ಹಕ್ಕುದಾರರು ರೈತಾಪಿ ವಲಯದವರೆಂದರೂ ಅವರನ್ನು ನೇರ-ರೈತ, ಪ್ರತ್ಯಕ್ಷರೈತ ಎನ್ನಲು ಕಷ್ಟವಾಗುತ್ತದೆ. ಸ್ವತಃ ಒಕ್ಕಲುತನ ಮಾಡುವ ಉತ್ತಿ ಬಿತ್ತಿ ಬೆಳೆ ತೆಗೆಯುವ ವ್ಯಕ್ತಿ ನಿಜವಾದ ರೈತನೆನಿಸುತ್ತಾನೆ. ಉತ್ತಿಸಿ ಬಿತ್ತಿಸಿ ಬೆಳೆ ತೆಗೆದುಕೊಳ್ಳುವವ, ಪರೋಕ್ಷ ರೈತ ಅಥವಾ ರೈತ ದುಡಿಮೆಯ ಅನುಭವದಾರನೆನಿಸಬಹುದು. ಇಂಥವನೂ ಪ್ರಾತಿನಿಧಿಕವಾಗಿ ರೈತರ ಪರವಾಗಿ ಹೋರಾಡಬಹುದು.

ರೈತಾಪಿ ವರ್ಗದ ಪ್ರಕಲ್ಪನೆಯನ್ನು ಸ್ವಲ್ಪ ಹಿಗ್ಗಿಸಿದರೆ ಗ್ರಾಮೀಣ ಕಸಬುದಾರರನ್ನು ಆಯಗಾರರನ್ನೂ ಆ ವರ್ಗದಲ್ಲಿ ಸೇರಿಸಿಕೊಳ್ಳಬಹುದು. ಇವರು ಗ್ರಾಮದ ಕೃಷಿಯನ್ನೂ ಕೃಷಿಕರನ್ನೂ ಅವಲಂಬಿಸಿರುತ್ತಾರೆ. ಇವರೂ ಕೂಡ ತಮ್ಮ ಉತ್ಪನ್ನ ಅಥವಾ ಸೇವೆಯ ಒಂದು ಪಾಲನ್ನು ಇತರ ರೈತಾಪಿ ವರ್ಗದವರಿಗೆ ಕೊಡಬೇಕಾಗುತ್ತದೆ.

ಈ ಅರ್ಥವನ್ನು ಇನ್ನಿಷ್ಟು ಹಿಗ್ಗಿಸಿದರೆ ಕೃಷಿಕೂಲಿ ಮಾಡುವ ಜನರನ್ನೂ ನಾವು ರೈತಾಪಿ ವರ್ಗದಲ್ಲಿ ಸೇರಿಸಬಹುದು. ಇವರು ಬೇಸಾಯದಲ್ಲಿ ತೊಡಗಿರುವರು. ಇವರಿಗೂ ಇತರ ರೈತಾಪಿ ಜನರಿಗೂ ಇರುವ ಒಂದು ಮುಖ್ಯ ಬೇದವೆಂದರೆ ಇವರು ಭೂಮಿಹೀನರು. ಆದರೆ ಗೇಣಿ ರೈತರು ಅಥವಾ ಕೋರಪಾಲು ರೈತರು ಕೃಷಿಕೂಲಿಗಳಾಗುವುದೂ, ಕೃಷಿಕೂಲಿಗಳಿಗೆ ಅನುಕೂಲವೊದಗಿ ಗೇಣಿರೈತರಾಗುವುದೂ ಅಥವಾ ಕೋರಪಾಲು ರೈತರಾಗುವುದೂ ಸರ್ವೇಸಾಮಾನ್ಯವಾಗಿ ಕಂಡುಬರುವ ಸಂಗತಿ.

ಭಾರತದ ವ್ಯವಸಾಯದ ಆರಂಭ ಕಾಲದಲ್ಲಿ ಹೆಣ್ಣು ಮೊದಲಿನ ಕೃಷಿ ಕಾಯಕದ ವಾರಸುದಾರಳಾಗಿ ಆರ್ಥಿಕ ಶಕ್ತಿ ಅವಳಲ್ಲದ್ದಂತೆ ತೋರುತ್ತದೆ. ಪುರುಷನು ಬೇಟೆ ಮಾಡುವುದೇ ಶೌರ್ಯದ ಕೆಲಸ, ನೆಲದೊಳಗಿನ ಗಡ್ಡೆಗೆಣಸುಗಳನ್ನು ಆಗೆಯುವುದು ಹೀನಾಯದ ಕೆಲಸ ಎಂದು ಆಕೆಯ ಪಾಲಿಗೆ ಬಿಟ್ಟನು ಹೀಗಾದ ಕಾರಣವೇ ಆಕೆಗೆ ಭೂಮಿಯಲ್ಲಿ ಮೂಲ ಆರ್ಥಿಕ ಸಂಪತ್ತಿನ ಮಾಧ್ಯಮದ ಶೋಧನೆಗೆ ಅನುವಾಯಿತು. ತುತ್ತು ತುಂಬಿಸುವ ಬೆಳೆಯೊಂದರ ಅವಿಷ್ಕಾರಕ್ಕೆ ನಾಂದಿಯಾಯಿತು. ಹೆಣ್ಣುಗಳಿಸಿಕೊಂಡ ಮಹತ್ವ ಹಾಗೂ ಆರ್ಥಿಕ ರೂಪದ ಶಕ್ತಿ ಕಂಡ ಗಂಡು ಕೃಷಿಯನ್ನು ತನ್ನ ಅಂಕೆಗೆ ತೆಗೆದುಕೊಳ್ಳಲು ಆರಂಭಿಸಿರಬೇಕು. ಮಾತೃಪ್ರಧಾನ ವ್ಯವಸ್ಥೆಗೆ ತಿರುಗುವ ಹಂತದಲ್ಲಿ ಇಂಥ ಅಧಿಕಾರ ಗಳಿಕೆಗೆ ಹೋರಾಟ ನಡೆದಿರುವಂತಿದೆ.[೧೧] ಈ ಸಂದರ್ಭದಲ್ಲಿ ಆಕೆ ಗಂಡಿನ ಪ್ರಾಕೃತಿಕ ದೈಹಿಕ ಬಲದೆದರು ಶರಣಾಗಿಯೇ,

ರಾಜಯೋಗಿಯೇ, ಅಧಿಕಾರ ಕಳೆದುಕೊಂಡಿರಬೇಕು. ಕೃಷಿ ಕಾರ್ಯದ ಒಂದು ಭಾಗವಂತು ಇಂದಿಗೂ ಅವಳ ಕೌಶಲ್ಯಕ್ಕೆ ಮೀಸಲಾಗಿದೆ. ಹೀಗಾಗಿ ಮೊದಲ ರೈತ ಪ್ರತಿಭಟನೆ ಹಾಗೂ ರಾಜ ಪರಿಹಾರ ಸೂತ್ರ ಹೆಣ್ಣಿನದೇ ಆಗಿದ್ದಿರಬೇಕೆನಿಸುತ್ತದೆ.

**ರೈತ ಚಳವಳಿ ಎಂದರೇನು?**

ನಮ್ಮ ಕೃಷಿ ಕಾರ್ಯ ಪರಂಪರೆಯನ್ನು, ರೈತ ಸತ್ಯಾಗ್ರಹ, ಚಳವಳಿ ಎಂಬ ಶಬ್ದಗಳನ್ನು, ವಿಶಾಲವಾದ ಅರ್ಥವನ್ನು ಹೊಂದಿದೆ. "ಚಳವಳಿ" ಚಳವಳಿ, ಚಳುವಳಿ (ನಾ) ಚಲನೆ; ಅಲ್ಲಾಡುವಿಕೆ; ಜರಗುವಿಕೆ; 'ಚಳವಳಿಸು' ಚಟುವಟಿಕೆಯಿಂದ ನಡೆಸುವ ಸಾಮಾಜಿಕ ವಿದಾಯ; ಸಾಮೂಹಿಕ ಕ್ಷೋಭ; ಯಾವುದಾದರೂ ಒಂದು ಪದ್ಧತಿ, ಕ್ರಮ ಅಥವಾ ಕಾನೂನಿನ ವಿಷಯವಾಗಿ ನಡೆಸುವ ಸಾಮೂಹಿಕ ಆಂದೋಲನ; ಚಳವಳಿಕ್ಕಾದರು ಇದೇ ಒಂದು ನೆವವಾಯಿತು. (ಜೀವರ್ಸಾ); ರಾಷ್ಟ್ರೀಯ ಚಳವಳಿಯಲ್ಲಿ ಸೇರಿಕೊಂಡು ತ್ಯಾಗಬುದ್ಧಿಯಿಂದ ದೇಶಸೇವೆ ಮಾಡಿದ ವೀರ ಚಳವಳಿಗಾರರು ಬ್ರಿಟಿಷರ ಕಾಲದಲ್ಲಿ ನಾಟ್ಯಕಲೆಯನ್ನು ಬಹಿಷ್ಕರಿಸಬೇಕೆಂದು ಚಳವಳಿವೆದ್ದಿತು.

'ಚಳವಳಿ' ಸ್ವದೇಶಿ ಚಳವಳಿಯ ಸಮಯದಲ್ಲಿ ತಮ್ಮ ನೌಕರಿಯನ್ನೂ ಬಿಡುವ ಪ್ರಸಂಗ ಬಂದಿದ್ದು, ಕರನಿರಾಕರಣೆಯ ಚಳವಳಿಯ ಸಮಯದಲ್ಲಿ ಅಲ್ಲಿ ಇದ್ದು. 'ಚಳವಳಿ' ಇವರು ಹೂಡಿದ ಚಳವಳಿ ಯುರೋಪಿನ ಬೌದ್ಧಿಕ ವಿಕಾಸವನ್ನು ಸ್ವರಗೊಳಿಸಿತು. ಸ್ವಾತಂತ್ರ್ಯದ ಚಳವಳಿ ತೀವ್ರವಾಯಿತು. ಕ್ಷಾಮ ನಿವಾರಣೆಗೆ ತಿಲಕರು ಚಳುವಳಿಯನ್ನೇ ಹೂಡಿದರು. 'ಚಳವಳಿ', 'ಚಳವಳಿ' ನೋ, ಚಳವಳಿಖೋರ (ನಾ) ಚಳವಳಿ ಮಾಡುವವನು ಚಳವಳಿ ಮಾಡುವ ಸ್ವಭಾವದನು; ಚಳವಳಿಖೋರ ಮಂದೀ ವನಸೊ ಬಲೇ ಚಂಚಲ [ಚಳವಳಿ+ - ಖೋರ (←ಕೋರ)] ಚಳವಳಿ ಎಂಬ ಪದವು ಹಲವಾರು ರೀತಿ ಅರ್ಥ ಹೊಂದಿದೆ.[೧೨]

ರೈತ 'ಕ್ರಾಂತಿ', 'ಚಳವಳಿ', ಎಂದರೇನು? 'ರೈತ ಸತ್ಯಾಗ್ರಹ' ಎಂದರೇನು? 'ರೈತರ ದಂಗೆ', 'ಬಂಡಾಯ' ಇವುಗಳು ಏತಕ್ಕಾಗಿ ನಡೆದವು ಎಂಬುದನು ತಿಳಿಯುವುದು ಅವಶ್ಯಕವಾಗುತ್ತದೆ. ರೈತ ಅಥವಾ ರೈತರು ತಮಗೆ ಒದಗಿದ ಸಂಕಷ್ಟಗಳ ಕುರಿತು ದೂರು ನೀಡುವುದು, ತಡವಾಗಿ ಬಂದ ಅಹವಾಲು ಒದಗಿದ ಸಂಕಷ್ಟಗಳ ಕುರಿತು ದೂರು ನೀಡುವುದು. ಪರಿಹಾರ ದೊರೆಯದಿದ್ದರೆ ಪ್ರತಿಭಟನೆ ತೋರುವುದು, ಅದು ಫಲಕಾರಿ ಆಗದಿದ್ದಾಗ, ಹೋರಾಟಗಳನ್ನು ನಡೆಸುತ್ತ ಸಾಗುವುದು, ಬಂಡಾಯ ಮಾಡುವುದು, ಕೊನೆಗೆ ನಿರ್ದಿಷ್ಟ ಗುರಿ, ಉದ್ದೇಶಗಳ ಸಂಘಟನೆಯನ್ನು ರೂಪಿಸಿ ಹೋರಾಟವನ್ನು ಗುರಿ ಈಡೇರುವವರೆಗೂ ನಡೆಸುವುದು. ಸಹನೆ, ಮೌನ ಪ್ರತಿಭಟನೆ, ಸಪ್ಪಳ ಪ್ರತಿಭಟನೆಗಳಿಂದ ಹಿಡಿದು ತೀವ್ರ ಚಳುವಳಿಯವರೆಗೆ ಇವೆಲ್ಲ ಕ್ರಮಾಗತ ವಿಧಾನಗಳೇ ಆಗಿವೆ. ಇಲ್ಲಿ ಗುರಿ ಸಾಧಿಸಿ ಮೊದಲಿನ ವ್ಯವಸ್ಥೆಯನ್ನು ಬದಲಾಯಿಸಬಹುದು. ಅಥವಾ ರೂಪಾಂತರಿಸಬಹುದು. ಅರ್ಥಾತ್ ಪರಂಪರಾಗತ ವ್ಯವಸ್ಥೆಯಲ್ಲಿ ಮೂಲಭೂತವಾಗಿ ಸಮಗ್ರ ಬದಲಾವಣೆಯು ಆಗಬಹುದು. ಇದು ಸಂಘರ್ಷದ ಹಾದಿಯಲ್ಲಿ ಹಿಂಸಾತ್ಮಕ ಲೇಪನ ಪಡೆದು ಬಂಡಾಯ ಅಥವಾ ಕ್ರಾಂತಿಯ ವಿಪರೀತ ರೂಪವನ್ನು

ತೋರಬಹುದು. ಆದರೆ ಎಲ್ಲ ಚಳುವಳಿ, ಬಂಡಾಯ ಕ್ರಾಂತಿಗಳು ನೇತ್ಯಾತ್ಮಕ, ನಕಾರಾತ್ಮಕ ಎನ್ನುವಂತಿಲ್ಲ, ಬದಲಾವಣೆಯ ಹಾದಿಯಲ್ಲಿ ಒತ್ತಾಯ, ಆಗ್ರಹಗಳಿಂದ ಹೆಚ್ಚು ಕಡಿಮೆ ಸಕಾರಾತ್ಮಕ ವಿಕಸನ ನೆಲೆಗಳನ್ನೂ ಹಾಯ್ದು ಬಂದವು. ಚಳುವಳಿಗಳು ಅಧಿಕಾರ ಅಥವಾ ಒಡೆತನ ವ್ಯವಸ್ಥೆಯನ್ನು ಶೋಷಣೆಯ ಸಂದರ್ಭವಾದಾಗ ಸಾಕಷ್ಟು ಮಣಿಸಬಲ್ಲ ಶಕ್ತಿ ಅರ್ಥಾತ್ ಸಮೂಹ ಸಂಘಟಿತ ಶಕ್ತಿ ಆಗಿರುತ್ತವೆ. ಈ ಅಧಿಕಾರ ಅಥವಾ ಒಡೆತನ ವ್ಯವಸ್ಥೆಯಲ್ಲಿ ರೈತವರ್ಗ, ಭೂ ಮಾಲೀಕ ವರ್ಗ, ಆಳು, ಒಡೆಯ ಎಂದೆಲ್ಲ ಆಧುನಿಕ ವರ್ಗೀಕರಣವಿದೆ.

ಬೇಸಾಯದಲ್ಲಿ ತೊಡಗಿರುವವನು ರೈತ ಎಂಬ ಇಂದಿನ ಸ್ಥೂಲ ಕಲ್ಪನೆಗೂ ಪ್ರಾಚೀನ ಸಂಪ್ರದಾಯಿಕ ಕಲ್ಪನೆಗೂ ವ್ಯತ್ಯಾಸವಿದೆ. ಸ್ವತಃ ಒಕ್ಕಲುತನ ಮಾಡುವ ಉತ್ತಿ, ಬಿತ್ತಿ, ಬೆಳೆ ತೆಗೆಯುವ ವ್ಯಕ್ತಿ ನಿಜವಾದ ರೈತನೆನಿಸುತ್ತಾನೆ. ಅನುಭವವದಾರ ಎನಿಸಬಹುದು. ಇಂಥವನೂ ಪ್ರತಿನಿಧಿಕವಾಗಿ, ರೈತರ ಪರವಾಗಿ, ಹೋರಾಡಬಹುದು. ಆದರೆ ಕೃಷಿ ಕಾರ್ಮಿಕ ಸಣ್ಣ ರೈತ ಇತ್ಯಾದಿ ಪ್ರಶ್ನೆ ಬಂದಾಗ ಇವನು ಶ್ರೀಮಂತ ರೈತನೇ, ದೊಡ್ಡ ರೈತನೇ ಎನಿಸಿ ಮಾಲೀಕಗಾತರಿಕೆಯ ಲೇಪನ ಇವನಿಗೆ ಅತ್ತಿಬಿಡುವುದು ಹಾಗಾಗಿ ಇವನ ಹಿತಾಸಕ್ತಿ ಕೃಷಿ ಕಾರ್ಮಿಕ ಅಥವಾ ಸಣ್ಣ ರೈತರ ಪರವಾಗಿರುತ್ತದೆ. ಎಂಬುದಕ್ಕೆ ಖಚಿತತೆ ಇಲ್ಲ. ರೈತರ ಕ್ರಾಂತಿ ಇದನ್ನು ವಿಕಾಸ ಕ್ರಮ ಎನ್ನಬಹುದು. ಇದಕ್ಕೆ ನಿರ್ಧಿಷ್ಟ ಗುರಿ ಸಿದ್ಧಾಂತ ಸಾಧಿತವಾಗದಿದ್ದಾಗ ದೀರ್ಘಕಾಲೀನ ಸ್ಥಾಯಿತ್ವವಿಲ್ಲದಿದ್ದಾಗ ಅಲ್ಪಕಾಲದ ಬದಲಾವಣೆ ಪ್ರಭಾವ ಹೀನವಾಗಬಹುದು. ರೈತ ಸತ್ಯಾಗ್ರಹ ಎಂದರೆ, ಅಸಹಕಾರ ಮಾರ್ಗದಿಂದ ಎದುರು ಪಕ್ಷದವರು ಮಣಿಯಬೇಕಾದ ಸ್ಥಿತಿಗೆ ತರುವುದು. ಹಕ್ಕೊತ್ತಾಯಗಳನ್ನು ಅವರ ಪ್ರಜ್ಞೆಗೆ ತರುವುದು, ಅಂದರೆ ತಮಗೆ ತಾವೇ ಅನುಭವಿಸುವ ನೋವು ಗುರಿಯ ಮಾರ್ಗದಲ್ಲಿ ನೋವೆಂದೆನಿಸದೆ ಕಾರ್ಯ ಸಾಧನೆಯಲ್ಲಿ ಮಗ್ನರಾಗುವುದಾಗಿದೆ. ಕ್ರಾಂತಿಯಲ್ಲಿ ಪರಹಿಂಸೆ, ನೋವು ಇರುವ ಸಾಧ್ಯತೆ ಇದ್ದರೂ, ಸತ್ಯಾಗ್ರಹದಲ್ಲಿ ಸ್ವನಿಷ್ಠೆ ಸ್ವಯಿಚ್ಛೆಯಿಂದ ನೋವು ಸಂಕಷ್ಟಗಳನ್ನು ಅನುಭವಿಸಿ ಕಾರ್ಯ ಸಾಧನೆಗೆ ಆಗ್ರಹ ಪಡಿಸುವುದಾಗುತ್ತದೆ. ಪ್ರಜ್ಞೆ ಬೆಳೆಸಿಕೊಳ್ಳಲಿಚ್ಛಿಸದ ಎದುರು ಪಕ್ಷದವರಲ್ಲಿ ಈ ಮಾರ್ಗ ಯಶಸ್ವಿಯಾಗುವುದು ಕ್ರಮ ಸಾಧ್ಯ ಗಾಂಧೀಜಿ ಇದರಲ್ಲಿ ಗೆದ್ದು ಯಶಸ್ವಿಯಾದವರು ರೈತರ ದಂಗೆ ಬಂಡಾಯದಲ್ಲಿ ಬಲಪ್ರಯೋಗ ಸಾಮಾನ್ಯವಾಗಿರುತ್ತದೆ. ಇದಕ್ಕೆ ಸೈದ್ಧಾಂತಿಕ ಹಿನ್ನೆಲೆ ಇರಲೇಬೇಕೆಂದಿಲ್ಲ. ಶೋಷಣೆ ವಿರುದ್ಧ ಪ್ರದರ್ಶನ, ಪ್ರತಿಭಟನೆ, ಬಹಿಷ್ಕಾರ, ಲೂಟಿ, ಹಿಂಸಾಚಾರ ಇವೆಲ್ಲ ಇದರ ವ್ಯಾಪ್ತಿಗೆ ಬರುತ್ತವೆ. ರೋಷ ಪ್ರತೀಕಾರ ತೀರಿದರೆ ದಂಗೆ ಅಲ್ಲಿಗೆ ನಿಲ್ಲಬಹುದು, ತಾತ್ಕಾಲದ ಪರಿಹಾರವೇ ಇದಕ್ಕೆ ಮದ್ದಾಗಬಹುದು. ಇದೊಂದು ರೀತಿ ತಕ್ಷಣದ ಉದ್ರೇಕವಾಗಿ ಶಮನದ ಹಾದಿ ಕಂಡ ಕೂಡಲೇ ಆ ರಭಸ ಇಳಿ ಮುಖವಾಗುತ್ತಾ ಬರುತ್ತದೆ.[೨]

# ಕೊನೆಟಿಪ್ಪಣಿಗಳು

೦೧. ಷೇಕ್ ಅಲಿ ಬಿ., 'ಕರ್ನಾಟಕ ಚರಿತ್ರೆ ಸಂಪುಟ-೬', ಪು-೮೦

೦೨. ವಿಶ್ವಕರ್ನಾಟಕ ಪತ್ರಿಕೆ, ೨೯ ಮಾರ್ಚ್ ೧೯೩೧

೦೩. ನಾಡಕರ್ಣಿ ಎ.ವಿ., 'ಕರ್ನಾಟಕದ ರೈತ ಹೋರಾಟಗಳು', ಪು-೨

೦೪. ನಾಗರಾಜ ಎಂ.ಜಿ., 'ಕರ್ನಾಟಕ ರೈತ ಚಳುವಳಿ-ಸತ್ಯಾಗ್ರಹಗಳು', ಸಂಪುಟ-೧, ಪು-೬, ೭

೦೫. ನಾಗೇಶ ಹೆಚ್.ವಿ., ಪುನೀತ ಎ.ಇ., 'ಭಾರತದಲ್ಲಿ ರೈತ ಹೋರಾಟಗಳು', ಪು-೨೦

೦೬. ರಾಮಮೂರ್ತಿ, ಪೋಲಂಕಿ; 'ರುಮಾಲು ಬಾರುಕೋಲು ನಂಜುಂಡಸ್ವಾಮಿ ಒಂದು ವ್ಯಕ್ತಿ ಚಿತ್ರ', ಪು-೪

೦೭. ರವಿವರ್ಮಕುಮಾರ್, 'ಪ್ರೊಫೆಸರ್ ಕಲಿಸಿದ ಡೈರೆಕ್ಟ್ ಆ್ಯಕ್ಷನ್', ಪು-೩೭

೦೮. ನಾಗೇಶ ಎಚ್.ವಿ., ಪುನೀತ ಎ.ಇ., ಅದೇ, ಪು-೪

೦೯. ಬಸವರಾಧ್ಯ ಎನ್(ಪ್ರ.ಸಂ)., 'ಕನ್ನಡ ನಿಘಂಟು, ಏಳನೆಯ ಸಂಪುಟ', ಪು-೭೬೫೨

೧೦. ಅದೇ, ಪು-೬೬೪೦

೧೧. ನಾಗರಾಜ ಎಂ.ಜಿ., ಅದೇ, ಪು-೧,೨

೧೨. ವೆಂಕಟಸುಬ್ಬಯ್ಯ ಜಿ (ಪ್ರ.ಸಂ)., 'ಕನ್ನಡ ನಿಘಂಟು, ಮೂರನೆ ಸಂಪುಟ', ಪು-೨೭೮೭, ೨೭೮೮

೧೩. ನಾಗರಾಜ ಎಂ.ಜಿ., ಅದೇ, ಪು-೮, ೯

## ಅಧ್ಯಾಯ - ನಾಲ್ಕು

# ಗುಲಬರ್ಗಾ ಜಿಲ್ಲೆಯ ರೈತ ಚಳವಳಿಗಳು

೪.೧. ಇನಾಮ್ ಭೂಮಿ ಹಿಂದಕ್ಕೆ ಪಡೆಯುವ ಚಳವಳಿ

೪.೨. ನೀರವಾರಿಗಾಗಿ ಚಳವಳಿ

೪.೩. ವಿದ್ಯುತ್ ಸಂಬಂಧ ಚಳವಳಿ

೪.೪. ತೊಗರಿಗೆ ಬೆಂಬಲ ಬೆಲೆಗಾಗಿ ಚಳವಳಿ

೪.೫. ಕಬ್ಬು ಬೆಳೆಗಾರರ ಚಳವಳಿ

೪.೬. ರೈತರ ಆತ್ಮಹತ್ಯೆ ಚಳವಳಿ

೪.೭. ಬೆಳೆ ವಿಮೆಗಾಗಿ ಚಳವಳಿ

# ಅಧ್ಯಾಯ - ನಾಲ್ಕು

## ಗುಲಬರ್ಗಾ ಜಿಲ್ಲೆಯ ರೈತ ಚಳವಳಿಗಳು

ಕರ್ನಾಟಕದ ರೈತ ಚಳವಳಿಗಳಲ್ಲಿ ಗುಲಬರ್ಗಾ ಜಿಲ್ಲೆಯ ರೈತ ಚಳವಳಿಗಳು ವಿಭಿನ್ನತೆಯಿಂದ ಕೂಡಿವೆ. ಈ ಜಿಲ್ಲೆಯಲ್ಲಿ ನಡೆದ ರೈತ ಚಳವಳಿಗಳು ಸರ್ಕಾರವನ್ನು ಇಕ್ಕಟ್ಟಿಗೆ ಸಿಲುಕಿಸುವಂಥ ಸಾಮಾರ್ಥ್ಯವನ್ನು ಹೊಂದಿದ್ದವು. ಈ ಜಿಲ್ಲೆಯ ರೈತರ ಹೋರಾಟದ ಹಾದಿ ಹಲವು ವಿಶೇಷಗಳಿಂದ ಕೂಡಿರುವುದು ಕಂಡು ಬರುತ್ತದೆ. ರೈತರು ತಮ್ಮ ಬೇಡಿಕೆಗಳು ಈಡೇರಿಕೆಗಾಗಿ ತಮ್ಮ ಪ್ರಾಣವನ್ನು ತ್ಯಾಗ ಮಾಡಲು ಸಿದ್ಧರಾಗಿದ್ದರು. ಇದರ ಹೋರಾಟದ ಫಲವಾಗಿ ಅವಶ್ಯವಾದ ಬೇಡಿಕೆಗಳು ಈಡೇರಿವೆ. ತದನಂತರ ವಿಳಂಬ ನೀತಿಗೆ ಜಾರಿರುವುದು ಕೂಡ ಗೋಚರಿಸುತ್ತದೆ. ಈ ಅಧ್ಯಾಯದಲ್ಲಿ ವಿವಿಧ ಬಗೆಯ ಚಳುವಳಿಗಳನ್ನು ನಡೆಸಿರುವುದು ಗಮನಾರ್ಹವಾದವುಗಳಾಗಿವೆ. ಸಂಕ್ಷಿಪ್ತ ಕಿರುನೋಟದಿಂದ ಗಮನಿಸುವುದು ಅವಶ್ಯಕವಾಗಿದೆ. ಹಾಗೂ ಚಳವಳಿಯಲ್ಲಿ ಭಾಗವಹಿಸಿದ ಚಳವಳಿಕಾರರು, ರೈತರು, ರಾಜಕೀಯ ವ್ಯಕ್ತಿಗಳು, ಮಠಾಧೀಶರು, ಮಹಿಳೆಯರು, ವಿದ್ಯಾರ್ಥಿಗಳು ಹೀಗೆ ಹಲವಾರು ಜನರು ಚಳವಳಿಯಲ್ಲಿ ಭಾಗವಹಿಸಿ, ರೈತರ ಸಮಸ್ಯೆಗಳನ್ನು, ಸರ್ಕಾರಕ್ಕೆ ಮುಟ್ಟಿಸುವ ಪ್ರಯತ್ನ ಮಾಡಿಸಿದರು. ಇಂಥ ಹೋರಾಟಗಾರರ ಬಗ್ಗೆಯು ಇಲ್ಲಿ ತಿಳಿಸುವ ಕಿರು ಪ್ರಯತ್ನ ಮಾಡಲಾಗಿದೆ.

ಈ ಅಧ್ಯಾಯನದ ಮೊದಲನೇ ಭಾಗದಲ್ಲಿ "ಇನಾಮ್ ಭೂಮಿ"ಗಾಗಿ ಚಳವಳಿಯನ್ನು ಮತ್ತು ಎರಡನೇ ಭಾಗದಲ್ಲಿ ನೀರಾವರಿಗಾಗಿ ಚಳವಳಿಯಲ್ಲಿ ಮಲ್ಲಾಬಾದ್ ಏತ ನೀರಾವರಿ ಆರಂಭಕ್ಕಾಗಿ ಈ ಭಾಗದ ರೈತರು ಮಾಡಿದ ಕಾಲ್ನಡಿಗೆ ಜಾಥಾ, ಎತ್ತಿನಬಂಡಿ ಯಾತ್ರೆ ಮತ್ತು ಆಮರಣ ಉಪವಾಸ ಸತ್ಯಾಗ್ರಹಗಳು, ಸರ್ಕಾರವನ್ನು ಇಕ್ಕಟ್ಟಿಗೆ ಸಿಲುಕಿಸಿ, ಮಲ್ಲಾಬಾದ ಏತ ನೀರಾವರಿ ಕಾಮಗಾರಿಯನ್ನು ಭೂಮಿ ಪೂಜೆ ಮಾಡಿಸಿದ್ದು ಸ್ಮರಣೀಯ ಕಾರ್ಯವಾಗಿದೆ. ಅಲ್ಲದೆ ಇಟಗಾ ಗಾಣಗಾಪುರ ಬ್ರಿಜ್‌ಕಮ್ ಬ್ಯಾರೇಜ್ ಕಾಮಗಾರಿ ಪ್ರಾರಂಭಕ್ಕಾಗಿ ಹೋರಾಟ, ಇವು ಸರ್ಕಾರವನ್ನು ದಂಗುಬಡಿಸಿದ ಬಗ್ಗೆ ಇಲ್ಲಿ ವಿವರಿಸಲಾಗಿದೆ.

೩ನೇ ಭಾಗದಲ್ಲಿ ವಿದ್ಯುತ್ ಚಳವಳಿಯನ್ನು ವಿವರಿಸಿದ್ದು. ಈ ಚಳವಳಿಯು ತೀವ್ರ ಸ್ವರೂಪ ಪಡೆದು ಲಾಠಿ ಪ್ರಹಾರ ಮಾಡುವ ಸ್ಥಿತಿಗೆ ತಲುಪಿತ್ತು. ಈ ಭಾಗದಲ್ಲಿ ರೈತರ ಪಂಪ್‌ಸೆಟ್‌ಗಳಿಗೆ ವಿದ್ಯುತ್ ಮೀಟರ್ ಅಳವಡಿಸಬಾರದು. ವಿದ್ಯುತ್ ಅನ್ನು ರೈತರಿಗೆ ಅನುಕೂಲವಾಗುವಂತೆ ಸರಬರಾಜು ಮಾಡುವ ಕುರಿತು ತಿಳಿಸಲಾಗಿದೆ.

ನಾಲ್ಕನೇ ಭಾಗದಲ್ಲಿ ಈ ಜಿಲ್ಲೆಯ ಪ್ರಮುಖ ಬೆಳೆ ರೈತರ ಜೀವನಾಡಿಯನ್ನು ಕುರಿತು, ವಿವರಿಸುವುದರ ಜೊತೆಗೆ, ತೊಗರಿಗೆ ಬೆಂಬಲ ನೀಡುವಂತೆ ಆಗ್ರಹಿಸಿದ ಪರಿಯನ್ನು ವಿಶ್ಲೇಷಿಸಲಾಗಿದೆ. ಐದನೇ ಭಾಗದಲ್ಲಿ ಕಬ್ಬು ಬೆಳೆಗಾರರು ತಾವು ಬೆಳೆದ ಕಬ್ಬಿಗೆ ಬೆಂಬಲ ಬೆಲೆ ನೀಡದೆ ಮತ್ತು ಬೆಲೆಯಿದ್ದ ಬೇರೆ ಪ್ರದೇಶಗಳಿಗೆ ಇಲ್ಲಿನ ಕಬ್ಬನ್ನು ಸಾಗಿಸಲು ಬಿಡದೆ ನಷ್ಟವನ್ನು ಅನುಭವಿಸುವಂತೆ ಮಾಡಿದ, ಸರ್ಕಾರದ ವಿರುದ್ಧ ಮಾಡಿದ ಚಳವಳಿಯನ್ನು ಮನೋಜ್ಞವಾಗಿ ಬಿಂಬಿಸಲು ಪ್ರಯತ್ನಿಸಲಾಗಿದೆ. ಅಲ್ಲದೆ ಆರನೇ ಭಾಗದಲ್ಲಿ ರೈತರು ಬೆಳೆದ ಬೆಳೆಗೆ ನಿಗಧಿತ ಬೆಲೆಯು ಸಿಗದೆ, ಬ್ಯಾಂಕ್, ಖಾಸಗಿ ವ್ಯಕ್ತಿಗಳಲ್ಲಿ ಸಾಲ ಪಡೆದು ತೀರಿಸಲು ಆಗದೆ ಇದ್ದ ಸಮಯದಲ್ಲಿ ಮರ್ಯಾದೆಗೆ ಅಂಜಿ ಆತ್ಮಹತ್ಯೆ ಮಾಡಿಕೊಂಡ ಹೃದಯವಿದ್ರಾವಕ ಘಟನೆಗಳಿಂದ ಕುಟುಂಬಗಳಿಗೆ ಭದ್ರತೆ ಮತ್ತು ಪರಿಹಾರ ಕೊಡಲು ಮಾಡಿದ ಹೋರಾಟಗಳ ಬಗ್ಗೆ ಸಂಕ್ಷಿಪ್ತವಾಗಿ ತಿಳಿಸಲಾಗಿದೆ. ಕೊನೆಯ ಭಾಗದಲ್ಲಿ ಈ ಜಿಲ್ಲೆಯಲ್ಲಿ ಬೆಳೆಯುವ ಪ್ರತಿಯೊಂದು ಬೆಳೆಗೆ ಪ್ರವಾಹ, ಬರಗಾಲ ಮುಂತಾದ ಸಂದರ್ಭದಲ್ಲಿ ನಷ್ಟ ಪರಿಹಾರವನ್ನು ನೀಡುವಂತೆ ನಡೆದ ಚಳವಳಿಗಳನ್ನು ಕುರಿತು ಮನಪೂರ್ವಕವಾಗಿ ತೀಕ್ಷ್ಣವಾಗಿ ವಿವರಿಸಲಾಗಿದೆ.

ಹೀಗೆ ಇನಾಮ್‌ಭೂಮಿಗಾಗಿ ಚಳವಳಿ, ನೀರಾವರಿಗಾಗಿ ಚಳವಳಿ, ವಿದ್ಯುತ್ ಚಳವಳಿ, ತೊಗರಿ ಬೆಂಬಲ ಬೆಲೆ ಚಳುವಳಿ, ಕಬ್ಬುಬೆಳೆಗಾರರ ಚಳವಳಿ, ರೈತರ ಆತ್ಮಹತ್ಯೆ ಚಳವಳಿ ಮತ್ತು ಬೆಳೆ ವಿಮೆ ಚಳುವಳಿಗಳನ್ನು ಈ ಅಧ್ಯಾಯದಲ್ಲಿ ವಿವರಿಸುವ ಸಣ್ಣ ಪ್ರಯತ್ನ ಮಾಡಲಾಗಿದೆ.

### ೪.೧. ಇನಾಮ್ ಭೂಮಿ ಹಿಂದಕ್ಕೆ ಪಡೆಯುವ ಚಳವಳಿ

ಕರ್ನಾಟಕ ಸರ್ಕಾರವು ೧೯೫೬ರಲ್ಲಿ ಅಸ್ತಿತ್ವಕ್ಕೆ ಬಂದ ಮೇಲೆ, ಜೋಡಿ ಇನಾಂ ಅನ್ನು ರದ್ದು ಮಾಡಿತು. ರೈತರ ಬಳಿ ದಾಖಲೆಗಳು ಹಾಗೂ ಅವರಿಗೆ ಓದು ಬರಹ ತಿಳುವಳಿಕೆ ಇಲ್ಲದಿದ್ದ ಸಂದರ್ಭದಲ್ಲಿ, ಜಮೀನುಗಳನ್ನು, ರೆವಿನ್ಯೂ ಗ್ರಾಮಗಳನ್ನು ರೂಪಿಸಿದಾಗ, ಜಮೀನುದಾರರಿಗೆ ಬಿಟ್ಟು ಕೊಟ್ಟಾಗ ಸಮಸ್ಯೆ ಶುರುವಾಯಿತು.[೧] ನಮ್ಮ ಗ್ರಾಮೀಣ ರೈತರ ಭೂಮಿ ವಾರಸುದಾರಿಕೆ ಹೆಚ್ಚಾಗಿ ಬಾಯ್ಮಾತಿನಲ್ಲಿ ಪರಂಪರಾಗತವಾಗಿ ನಡೆದು ಬಂದಿದ್ದು, ಮುಂದೆ ತಮ್ಮ ಭೂಮಿಯನ್ನು ಪಡೆಯಬೇಕಾದರೆ ಹಲವಾರು ಸಮಸ್ಯೆಗಳಿಗೆ ಕಾರಣವಾಗಿ ತಮ್ಮ ಹಕ್ಕು ಪಡೆಯಲು ಹೋರಾಟ ನಡೆಸಿದರು.

ಇನಾಂ ಎಂಬ ಪದವು ಪರ್ಶಿಯನ್ ಭಾಷೆಯಿಂದ ಬಂದ ಪದವಾಗಿದೆ. ಪ್ರಾಚೀನ ಕಾಲದಲ್ಲಿ ದಕ್ಷಿಣ ಭಾರತದಲ್ಲಿ ಒಂದು ವಿಧದ ಸಾಗುವಳಿ ಭೂಮಿಗೆ ಹೀಗೆ ಕರೆಯುತ್ತಿದ್ದರು. ಸಾಹಿತ್ಯಕವಾದ ಅರ್ಥದಲ್ಲಿ ಕಂದಾಯ ರಹಿತ ಕೊಡುಗೆ ಭೂಮಿಯೆಂದು ಹೇಳಬಹುದು. ಇನಾಮ್ ಭೂಮಿಯ ಹಾಗೆ

ಜಹಾಗೀರ ಪದ್ಧತಿಯೂ ಒಂದು ವಿಧವಾಗಿದ್ದು, ಇದು ಕೂಡ ಕಂದಾಯ ರಹಿತ ಭೂಮಿಯಾಗಿತ್ತು. ಈ ಹಿಡುವಳಿಗಳನ್ನು ಪ್ರಾಚೀನ ಕಾಲದಿಂದ ಬಂದ ರಾಜವಂಶಗಳು, ಧಾರ್ಮಿಕ ಸಂಸ್ಥೆಗಳಿಗೆ ಮತ್ತು ಅಧಿಕಾರಿಗಳಿಗೆ ಕೊಟ್ಟು ರಕ್ಷಿಸುತ್ತಾ ಬಂದಿದೆ. ಇದು ಭಾರತದ ಸ್ವಾತಂತ್ರ ಪಡೆದ ನಂತರ ೧೯೫೪-೧೯೫೫ರಲ್ಲಿ ಇವುಗಳ ರದ್ದಾಯಿತು.

ಸ್ವಾತಂತ್ರ್ಯ ನಂತರ ಮೈಸೂರು ರಾಜ್ಯದಲ್ಲಿ ಸರ್ಕಾರದಿಂದ ಜಾರಿಗೆ ಬಂದ ೧೯೫೪-೫೫ರ ಇನಾಂ ಮತ್ತು ಜಹಗೀರ್ ರದ್ಧತಿ ಶಾಸನ, ಬಹಳ ಮುಖ್ಯವಾದದ್ದು. ಈ ಕೃಷಿಯ ಪದ್ಧತಿಯನ್ನು ಸ್ವಾತಂತ್ರ್ಯ ಪೂರ್ವದಲ್ಲಿ ಅಂದರೆ ಪ್ರಜಾ ಪ್ರತಿನಿಧಿ ಸಭೆ ಪ್ರಾರಂಭವಾದಾಗಿನಿಂದಲೂ ಇನಾಂ ಮತ್ತು ಜಹಗೀರ್ ಪದ್ಧತಿಯನ್ನು ರದ್ದು ಮಾಡಲು ಪ್ರಯತ್ನ ಪಟ್ಟಿದ್ದರೂ, ಸಾಧ್ಯವಾಗಿರಲಿಲ್ಲ. ಕಡಿದಾಳ್ ಮಂಜಪ್ಪನವರು ಕಂದಾಯ ಮಂತ್ರಿಯಾದ ಸಂದರ್ಭದಲ್ಲಿ ಈ ಶಾಸನವನ್ನು ಜಾರಿಗೆ ತಂದಿರುವುದು ಕ್ರಾಂತಿಕಾರಕವಾಗಿತ್ತು. ಧರ್ಮದ ಹೆಸರಿನಲ್ಲಿ ದೇವಾಲಯಗಳಿಗೆ ಮತ್ತು ಮಠಗಳಿಗೆ ಇನಾಮ್ ಮತ್ತು ಜಹಗೀರ್ ಹೆಸರಿನಲ್ಲಿ ಬಿಟ್ಟಿದ್ದ ಆಸ್ತಿಯ ಹಕ್ಕನ್ನು ರದ್ದು ಮಾಡಿತ್ತು. ಆ ಭೂಮಿಯನ್ನು ಉಳುವವನಿಗೆ ನೀಡುವ ಮುಖ್ಯ ಉದ್ದೇಶವನ್ನು ಇಟ್ಟುಕೊಂಡು ಈ ಕಾಯ್ದೆಯನ್ನು ಜಾರಿಗೆ ತಂದರು.[೨]

ಗುಲಬರ್ಗಾ ಜಿಲ್ಲೆಯಲ್ಲಿ ಇನಾಂ ಜಮೀನು ಹಿಂದಕ್ಕೆ ಪಡೆಯುವಂತೆ, ಜಿಲ್ಲೆಯ ತಾಲ್ಲೂಕುಗಳ ರೈತರು ಮತ್ತು ರೈತ ಸಂಘಟನೆಗಳು ಹೋರಾಟ ಮಾಡಲು ಮುಂದಾದರು. ಈ ಹೋರಾಟ ಹಿನ್ನೆಲೆಯಿಂದ ಇನಾಂ ಜಮೀನುಗಳನ್ನು ಉದ್ದೇಶಿಸಿ ಶ್ರೀ ಧರ್ಮಸಿಂಗ್ ಅವರು ವಿಧಾನ ಸಭೆಯಲ್ಲಿ ಸಹ ಚರ್ಚೆ ಮಾಡಿದರು. ಈ ಕಾಯ್ದೆಯನ್ನು ಇಲ್ಲಿನ ರೈತರಿಗೆ ಸರಿಯಾಗಿ ತಿಳಿದಿರುವುದಿಲ್ಲ. ಆದ್ದರಿಂದ ಇನಾಂ ಜಮೀನು ಫಾರಂ ತುಂಬಿ ಹಕ್ಕನ್ನು ಪಡೆದುಕೊಳ್ಳಲು ಕಾಲಾವಕಾಶ ಕಲ್ಪಿಸಬೇಕು ಎಂದು ವಿಧಾನ ಸಭೆಯಲ್ಲಿ ಪಟ್ಟು ಹಿಡಿದು ದಿನಾಂಕ ೨೫.೦೩.೧೯೮೩ರಲ್ಲಿ ಆಗ್ರಹಿಸಿದರು.[೩]

ಹಾಗೆಯೇ ಗುಲಬರ್ಗಾ ಜಿಲ್ಲೆಯ ತಾಲ್ಲೂಕುಗಳಲ್ಲಿ ರೈತರು ಮತ್ತು ರೈತ ಹೋರಾಟಗಾರರು ಸರದಿ ಮುಷ್ಕರ ಹೋರಾಟಗಳನ್ನು ಆರಂಭಿಸಿದರು. ಈ ಹೋರಾಟಗಳ ಬಗ್ಗೆ ಕಂದಾಯ ಮಂತ್ರಿಗಳ ಗಮನಕ್ಕೆ ತಂದರು ಅಂದಿನ ಕಂದಾಯ ಸಚಿವ ಶ್ರೀ ವಿ.ಎಲ್.ಪಾಟೀಲ್ ಅವರು ಈ ಇನಾಂ ಭೂಮಿಯ ಬಗ್ಗೆ ವಿಚಾರಣೆ ಮಾಡಿದ ನಂತರ, ಭೂಮಿ ಬಗ್ಗೆ ಉತ್ತರಿಸುತ್ತ, ಇನಾಂ ಭೂಮಿಗಳ ಮುದ್ದತ್ತು ಆದ ನಂತರ ಕೆಲವೆಡೆ ಲಕ್ಷಾಂತರ ಎಕರೆ ಜಮೀನು ಬಗ್ಗೆ ಸಾವಿರಾರು ರೈತರು ಫಾರಂ ತುಂಬುವುದು ದಿನಾಂಕ ೩೧.೦೬.೧೯೮೧ ರೊಳಗೆ ಮಾಡಬೇಕು ಎಂದು ನೀತಿಯನ್ನು ಜಾರಿಗೆ ಮಾಡಿದರು. ಈ ಆದೇಶದಂತೆ ಜಾರಿ ಮಾಡಲಾಗುತ್ತದೆ ಎಂದರು. ಇದರಿಂದ ರೈತರು ಈ ದಿನಾಂಕವನ್ನು ಮುಂದಕ್ಕೆ ಹಾಕುವಂತೆ ಹೋರಾಟ ಮಾಡಲು ಸಿದ್ಧರಾದರು. ಈ ದಿನಾಂಕದೊಳಗೆ ಫಾರಂ ತುಂಬುವುದು. ಆಗಲಿಲ್ಲ ನಿಯಮದ ಪ್ರಕಾರ ಜಮೀನುಗಳನ್ನು ಸರ್ಕಾರ ತಹಸೀಲ್ದಾರ್ ಮೂಲಕ ಇನಾಂ ಜಮೀನನ್ನು ವಶಪಡಿಸಿಕೊಂಡಿತು. ಆದರೆ ರೈತರು ಮತ್ತು ರೈತ ಸಂಘಟನೆಗಳು, ಹೋರಾಟಗಾರರು, ಈ ನೀತಿಯ ವಿರುದ್ಧ ದಿನಾಂಕ ೧೬.೦೩.೧೯೮೩ರಂದು ತಾಲೂಕು ಕಛೇರಿ ಎದುರು ನಿರಶನ ಮುಷ್ಕರ ಪ್ರತಿಭಟನೆ ಆರಂಭಿಸಿದರು.[೪]

ಫಾರಂ ತುಂಬಿಸುವ ತಾರೀಖಿನ ವಿಸ್ತರಣೆ, ಇನಾಂ ಜಮೀನನ್ನು ವಶಪಡಿಸಿಕೊಳ್ಳುವುದಕ್ಕೆ ತಡೆ, ಗೇಣಿದಾರರೆ, ಉಳುತ್ತಿದ್ದ ಭೂಮಿಯ ಮಾಲೀಕರೆಂಬ ಘೋಷಣೆ ಮಾಡಬೇಕು, ಎಂದು ಬೇಡಿಕೆಯನ್ನು ಮುಂದಿಟ್ಟು, ಸರದಿ ಮುಷ್ಕರದ ಮೂಲಕ ತಾಲೂಕು ಕಛೇರಿ ಮುತ್ತಿಗೆ ಹಾಕಿದ್ದರು. ಈ ಬೇಡಿಕೆಗಳನ್ನು ಮನ್ನಿಸಿ ದಿನಾಂಕವನ್ನು ಸರ್ಕಾರ ವಿಸ್ತರಿಸಿತು. ಫಾರಂ ತುಂಬಿ ಸ್ವಾದೀನಾನುಭವ ಹಕ್ಕನ್ನು ಪಡೆದುಕೊಳ್ಳಲು ಪ್ರಚಾರ ಮಾಡಿ ತಿಳಿಸಿದೆ. ಈ ಹೋರಾಟದ ಫಲವಾಗಿ ದಿನಾಂಕ ೩೦.೦೬.೧೯೮೩ ರೊಳಗೆ ಅರ್ಜಿ ನೀಡಲು ಈ ಸವಲತ್ತು ಪಡೆದುಕೊಳ್ಳಲು ತಿಳಿಸಿದೆ.[೫] ತಿದ್ದುಪಡಿಗಳನ್ನು ನಿಯಮಗಳಿಗೆ ಮಾಡಲು ಉದ್ದೇಶಿಸಿದೆ ಎಂದರು. ಹೀಗೆ ರೈತರ ಹೋರಾಟದ ಮುಖಾಂತರ ತಮ್ಮ ಬೇಡಿಕೆಯನ್ನು ಸರ್ಕಾರದಿಂದ ಪಡೆದುಕೊಂಡರು.

### ೪.೨. ನೀರಾವರಿಗಾಗಿ ಚಳವಳಿ

ರಾಷ್ಟ್ರದ ಅಭಿವೃದ್ಧಿಯಲ್ಲಿ ಕೃಷಿ ಅಭಿವೃದ್ಧಿಗೆ ಅನಿಶ್ಚಿತ ಮಳೆಯಿಂದ ಉಂಟಾಗಬಹುದಾದ, ಅಸ್ಥಿರತೆ ಹಾಗೂ ಸಂಬಂಧಪಟ್ಟ ಆರ್ಥಿಕ ಮತ್ತು ಸಾಮಾಜಿಕ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳುವಲ್ಲಿ ಸಿಂಧೂ ನದಿ ಕಣಿವೆ ಸಂಸ್ಕೃತಿ ಕಾಲದಿಂದಲೂ, ನಮ್ಮ ಪೂರ್ವಜರು, ಕೃತಕ ನೀರಾವರಿ ಅಭಿವೃದ್ಧಿಗೆ, ಅದರಲ್ಲೂ ವಿಶೇಷವಾಗಿ ಸಣ್ಣ ನೀರಾವರಿ ಮೂಲಗಳಾದ ಕೆರೆ, ಕುಂಟೆ, ತೋಡುಬಾವಿ, ನೀರಾವರಿಯಿಂದ ಕೃಷಿ ಅಭಿವೃದ್ಧಿಗೆ ಆದ್ಯತೆ ನೀಡಿದ್ದು ತಿಳಿದು ಬರುತ್ತದೆ.[೬] ಮಿತಿ ಮೀರಿದ ಜನಸಂಖ್ಯೆ, ಹೆಚ್ಚಿದ ಬಡತನ, ತೀವ್ರತರ ಆಹಾರ ಮತ್ತು ನಿರುದ್ಯೋಗ ಸಮಸ್ಯೆಗಳ ನಿವಾರಣೆಯ ನಿಟ್ಟಿನಲ್ಲಿ, ಸ್ವಾತಂತ್ರ್ಯ ನಂತರ ರಾಷ್ಟ್ರ ವಿವಿಧ ಪಂಚವಾರ್ಷಿಕ ಯೋಜನೆಗಳಲ್ಲಿ ನೀರಾವರಿ ಯೋಜನೆಗಳಿಗೆ ಆದ್ಯತೆ ನೀಡಿ ನೀರಾವರಿ ಅಭಿವೃದ್ಧಿಗೆ ಗರಿಷ್ಠ ಪ್ರಮಾಣದ ಬಂಡವಾಳವನ್ನು ತೊಡಗಿಸಲಾಗಿದೆ. ಸ್ವತಂತ್ರ ಭಾರತದ ಪ್ರಥಮ ಪ್ರಧಾನಿಗಳಾದ ಜವಾಹರ್‌ಲಾಲ್ ನೆಹರೂರವರು, ಬೃಹತ್ ಹಾಗೂ ಮಧ್ಯಮ ನೀರಾವರಿ ಜಲಾಶಯಗಳಿಗೆ ಪ್ರಾಮುಖ್ಯತೆ ನೀಡಿದ್ದಾರೆ.

ಮಾನವನ ಹುಟ್ಟು, ಬೆಳವಣಿಗೆ ಹಾಗೂ ನಾಗರಿಕತೆಯು ಪ್ರಾರಂಭವಾದದ್ದು, ನದಿಗಳ ದಂಡೆಯ ಮೇಲೆ. ನೀರಿನಿಂದ ಈ ಜಗತ್ತು ನಿರ್ಮಾಣವಾಗಿದೆ ಎಂದು ಶತಪತ ಬ್ರಾಹ್ಮಣದಲ್ಲಿ ಹೇಳಿದೆ. ಜೀವಂ ಜೀವನಾಧಾರ ಎಂಬ ಸಂಸ್ಕೃತ ವಾಣಿಯೊಂದಿಗೆ ಸಂಸ್ಕೃತದಲ್ಲಿ ಜೀವನ ಎಂಬ ಪದಕ್ಕೆ ಜಲ ಅಥವಾ ನೀರು ಎಂದರ್ಥ. ನೀರಿಲ್ಲದೆ ಜೀವನವಿಲ್ಲ ಒಂದು ನಾಡಿನ ಸರ್ವತೋಮುಖ ಅಭಿವೃದ್ಧಿಯಾಗಬೇಕಾದರೆ, ಆ ನಾಡಿನ ನೀರಾವರಿ ಸ್ಥಿತಿಯನ್ನು ಅವಲಂಬಿಸಿರುತ್ತದೆ.[೭] ನಿಸರ್ಗದ ಮಹಾವರದಾನವೆನಿಸಿರುವ, ನದಿಗಳ ಉಪಯುಕ್ತತೆ ಮತ್ತು ಬಳಕೆಯ ಬಗ್ಗೆ ಪ್ರಾಚೀನ ಕಾಲದಿಂದಲೂ ಪ್ರಜ್ಞಾವಂತರು ಚಿಂತನೆ ನಡೆಸುತ್ತಾ ಬಂದಿದ್ದಾರೆ. ಈ ಹಂತದಲ್ಲಿ ಜನತೆಯ ಆರ್ಥಿಕ ಉತ್ಕರ್ಷಕ್ಕೆ ಕಾರಣವಾಗುವಂತೆ, ನೀರಾವರಿ ವಿಚಾರ ಇತ್ತೀಚಿಗೆ ನಾಡಿನ ಎಲ್ಲಾ ವರ್ಗದವರ ಗಮನವನ್ನು ಸೆಳೆಯುತ್ತಿರುವುದು ಸ್ವಾಗತಾರ್ಹವು ಮತ್ತು ಶುಭ ಸೂಚಕವಾಗಿದೆ. ಗುಲಬರ್ಗಾ ಜಿಲ್ಲೆಯಲ್ಲಿ ನೀರಾವರಿಗಾಗಿ ಹಲವಾರು ಚಳವಳಿಗಳು ನಡೆದಿವೆ. ಈ ಚಳವಳಿಗಳಲ್ಲಿ ನೀರಾವರಿಯ ಮಹತ್ವ ಹಾಗೂ ಪ್ರಾಮುಖ್ಯತೆಯನ್ನು ಕಾಣುತ್ತೇವೆ. ಅಂಥ ಚಳವಳಿಯಲ್ಲಿ

ಮಲ್ಲಾಬಾದ ಏತ ನೀರಾವರಿ, ಮತ್ತು ಇಟಗಾ ಗಾಣಗಾಪೂರ ಬ್ರಿಜ್‌ಕಮ್ ಬ್ಯಾರೇಜ್, ಕೋನಾ ಹಿಪ್ಪರಗಿ, ಸರಡಗಿ ಬ್ಯಾರೇಜ್, ನಿರ್ಮಿಸುವಂತೆ ಒತ್ತಾಯಿಸಿ ಹಲವಾರು ರೈತ ಚಳವಳಿಗಳು ನಡೆದಿವೆ. ಅವು ಈ ಕೆಳಗಿನಂತೆ ಕಾಣಬಹುದು.

## ಮಲ್ಲಾಬಾದ ಏತ ನೀರಾವರಿಗಾಗಿ ಹೋರಾಟಗಳು

ಮಲ್ಲಾಬಾದ ಏತ ನೀರಾವರಿಗಾಗಿ ಶ್ರೀ ಕೇದಾರಲಿಂಗಯ್ಯ ಹಿರೇಮಠರವರು ೧೯೯೪ರಲ್ಲಿ ಈ ನೀರಾವರಿಯ ಬಗ್ಗೆ ಹಿರಿಯ ಇಂಜಿನಿಯರ್‌ಗಳನ್ನು ಕಂಡು ವಿಚಾರ ಮಾಡಿದರು. ಅಂದರೆ ಜೇವರ್ಗಿ ತಾಲ್ಲೂಕಿನ ೪೦ ಹಳ್ಳಿಗಳು ಎತ್ತರ ಪ್ರದೇಶದಲ್ಲಿ ಇರುವುದರಿಂದ ಕೃಷ್ಣ ಮೇಲ್ದಂಡೆ ಯೋಜನೆಯ ನೀರಾವರಿಯಿಂದ, ವಂಚಿತರಾಗಿರುವುದನ್ನು ಕಂಡು ಶ್ರೀ ಕೇದಾರಲಿಂಗಯ್ಯ ಹಿರೇಮಠನವರು ಈ ಹಳ್ಳಿಗಳಿಗೆ ನೀರಾವರಿ ಕಲ್ಪಿಸಿದರೆ ಇಲ್ಲಿನ ಜನರು ನೆಮ್ಮದಿಯ ಬದುಕು ನಡೆಸುತ್ತಾರೆ ಮತ್ತು ಬರಗಾಲದ ಸಂದರ್ಭದಲ್ಲಿ ಜೀವನ ನಡೆಸಲು ಸಾಧ್ಯವಾಗುತ್ತದೆ ಎಂದು ತಿಳಿದು ಇವರು ಈ ಯೋಜನೆಯ ಬಗ್ಗೆ ಹಳ್ಳಿಗಳ ರೈತರಿಗೆ, ಮಲ್ಲಾಬಾದ ಏತ ನೀರಾವರಿಯು ನಿಮಗೆ ನೀರಾವರಿ ಕಲ್ಪಿಸಲು ಸಾಧ್ಯವಿದೆ ಎಂದು ಪ್ರತಿ ಹಳ್ಳಿಗಳಿಗೆ ಹೋಗಿ ಈ ನೀರಾವರಿಯ ಬಗ್ಗೆ ರೈತರಿಗೆ ವಿವರವಾದ ಮಾಹಿತಿಯನ್ನು ಕೊಟ್ಟರು. ಈ ಏತ ನೀರಾವರಿಯು ಸರ್ಕಾರದ 'ಬಿ' ಸ್ಕೀಮ್‌ನಲ್ಲಿದೆ. ಇದರ ಬಗ್ಗೆ ಸರ್ಕಾರ ಕಾಳಜಿ ವಹಿಸಲಿಲ್ಲ. ಆದ್ದರಿಂದ ಈ ಯೋಜನೆ ಪ್ರಾರಂಭವಾಗಬೇಕಾದರೆ ನಿರಂತರ ಹಾಗೂ ದೊಡ್ಡ ಮಟ್ಟದ ಹೋರಾಟಗಳಿಂದ ಸಾಧ್ಯ ಎಂದರು. ಈ ಭಾಗದ ರೈತರು, ರೈತಮುಖಂಡರು, ಹೋರಾಟಗಾರರು, ಜನಸಾಮಾನ್ಯರಿಗೆ ಕರೆಕೊಟ್ಟು, ಹೋರಾಟ ಮಾಡಲು ಸಿದ್ಧರಾದ್ದರು.

ಶ್ರೀ ಕೇದಾರಲಿಂಗಯ್ಯ ಹಿರೇಮಠ ಅವರು ಒಬ್ಬ ರಾಜಕಾರಣಿ, ಅಷ್ಟೇ ಅಲ್ಲ, ಪ್ರಗತಿಪರ ಚಿಂತಕರಾಗಿದ್ದರು. ಇವರು ಸಮಾಜದ ಒಳಿತಿಗಾಗಿ ಹಲವಾರು ರೀತಿಯ ಮೂಲಭೂತ ಸೌಲಭ್ಯ ಇನ್ನೂ ದೊರಕಿಸಿಕೊಡಬೇಕು ಎಂಬ ವಿಚಾರದಿಂದ ಮಲ್ಲಾಬಾದ ಏತ ನೀರಾವರಿ ಬಗ್ಗೆ ವಿಚಾರ ಮತ್ತು ಇದರ ಬಗ್ಗೆ ಅಧ್ಯಯನ ಮಾಡಿದರು. ಇವರು ಈ ಯೋಜನೆಯು ಸರ್ಕಾರದ 'ಬಿ' ಸ್ಕೀಮ್‌ನಲ್ಲಿ ಇರುವ ಈ ನೀರಾವರಿ ಯೋಜನೆಯನ್ನು ಸರ್ಕಾರದಿಂದ ನಿರ್ಲಕ್ಷ್ಯಕ್ಕೆ ಒಳಗಾಗಿದೆ. ಈ ಒಂದು ನೀರಾವರಿ ಎತ್ತರ ಪ್ರದೇಶವಾಗಿದರಿಂದ ಇದರ ಬಗ್ಗೆ ಸರ್ಕಾರ ಕಾಳಜಿ ವಹಿಸಿರಲಿಲ್ಲ. ಈ ಯೋಜನೆಯನ್ನು ಅಧ್ಯಯನ ಮಾಡಿದ ನಂತರ ಹಲವಾರು ನೀರಾವರಿ ತಜ್ಞರು ಮತ್ತು ಹಿರಿಯ ಇಂಜಿನೀಯರ್‌ಗಳನ್ನು ಭೇಟಿ ಮಾಡಿ ಈ ನೀರಾವರಿ ಯೋಜನೆಯ ಬಗ್ಗೆ ವಿಚಾರಗಳನ್ನು ತಜ್ಞರಿಗೆ ತಿಳಿಸಿಕೊಟ್ಟು, ಅವರಿಂದ ಸಲಹೆ ಪಡೆದುಕೊಂಡರು. ಈ ಎತ್ತರ ಪ್ರದೇಶಕ್ಕೆ ಯಾಕೆ ನೀರಾವರಿ ಮಾಡಬಾರದು ಎಂಬ ವಿಚಾರವನ್ನು ಮನದಲ್ಲಿ ದೃಢಮಾಡಿಕೊಂಡರು. ಇವರ ದೃಢ ನಿರ್ಧಾರದಿಂದ ಈ ಪ್ರದೇಶಕ್ಕೆ ನೀರಾವರಿ ಮಾಡಲು ಸಾಧ್ಯವಾಗುತ್ತದೆ ಎಂಬ ದೃಢ ಸಂಕಲ್ಪ ಮಾಡಿಕೊಂಡು ಮಲ್ಲಾಬಾದ ಏತ ನೀರಾವರಿಗಾಗಿ ಸರ್ಕಾರದ ವಿರುದ್ಧ ಮತ್ತು ಆಡಳಿತದ ವಿರುದ್ಧ ಹೋರಾಟ ಮಾಡಲು ಮುಂದಾದರು. ಇವರು ಹೋರಾಟದ

ದಿನಗಳಲ್ಲಿ ಹಲವಾರು ರೀತಿಯ ಹಂತಗಳ ಮುಖಾಂತರ ಚಳವಳಿ ಮಾಡಲು ಮುಂದಾದರು. ಇವರ ದೃಢ ನಿರ್ಧಾರದಿಂದ ಚಳವಳಿ ಮಹತ್ವ ಪಡೆದುಕೊಂಡಿತು.

ರೈತ ಚಳುವಳಿಗಳಲ್ಲಿ ಮಲ್ಲಾಬಾದ್ ಏತ ನೀರಾವರಿ ಚಳುವಳಿಯೂ ಒಂದಾಗಿದೆ. ಮಲ್ಲಾಬಾದ ಏತ ನೀರಾವರಿಯು ಈ ಭಾಗದ ಬಹುದಿನಗಳ ಕನಸಾಗಿದೆ. ಈ ಏತ ನೀರಾವರಿಯಿಂದ ಸುಮಾರು ೪೦ ಹಳ್ಳಿಗಳಿಗೆ ನೀರಾವರಿ ಪ್ರದೇಶವಾಗಿ ಪರಿವರ್ತನೆ ಹೊಂದುತ್ತದೆ. ಮಲ್ಲಾಬಾದ್ ಏತ ನೀರಾವರಿಯಾಗಬೇಕು ಎಂಬ ಒತ್ತಾಸೆ ಎಲ್ಲಾ ಜನರಲ್ಲಿತ್ತು. ಈ ಏತ ನೀರಾವರಿಯ ಬಗ್ಗೆ ಸರ್ಕಾರಕ್ಕೆ ಮನವರಿಕೆ ಮಾಡಿಕೊಡುವುದು ಅಗತ್ಯವಾಗಿತ್ತು. ಈ ನಿಟ್ಟಿನಲ್ಲಿ ಕಾರ್ಯ ಪ್ರವೃತ್ತರಾಗಿ ಸಂಬಂಧಪಟ್ಟ ಇಲಾಖೆಯೊಂದಿಗೆ ಚರ್ಚಿಸಿ, ಮಲ್ಲಾಬಾದ ಏತ ನೀರಾವರಿಯನ್ನು ಸರ್ಕಾರ ಕೈಗೆತ್ತಿಕೊಳ್ಳಬೇಕೆಂದು ತೀವ್ರವಾದ ಹೋರಾಟವನ್ನು ಮೊದಲಿಗೆ ಪ್ರಾರಂಭಿಸಿದವರೆ ಶ್ರೀ ಕೇದಾರಲಿಂಗಯ್ಯ ಹಿರೇಮಠರವರೆಂದರೆ ತಪ್ಪಾಗಲಿಕ್ಕಿಲ್ಲ. ಈ ಏತ ನೀರಾವರಿ ಪ್ರಾರಂಭಿಸಬೇಕೆಂದು ಜನಸಾಮಾನ್ಯರಲ್ಲಿ ಅರಿವು ಮೂಡಿಸುವಲ್ಲಿ ಯಶಸ್ವಿಯಾದರು. ಇದರ ಪರಿಣಾಮವಾಗಿ ಇಂದು ಮಲ್ಲಾಬಾದ ಏತ ನೀರಾವರಿ 'ಬಿ' ಸ್ಕೀಮ್‌ನಲ್ಲಿ ಸ್ಥಾನ ಪಡೆದುಕೊಂಡಿದೆ.

ಮಲ್ಲಾಬಾದ ಏತ ನೀರಾವರಿಗಾಗಿ ಅನೇಕ ಚಳವಳಿಗಳು ನಡೆದಿವೆ. ಅವುಗಳಲ್ಲಿ ಕೆಲವನ್ನು ಅಧ್ಯಯನದ ದೃಷ್ಟಿಯಿಂದ ಆಯ್ಕೆಮಾಡಿಕೊಳ್ಳಲಾಗಿದೆ. ಅವುಗಳು ಯಾವುವೆಂದರೆ

೧. ಮಲ್ಲಾಬಾದ ಏತ ನೀರಾವರಿಗಾಗಿ ಮೊದಲನೆ ಚಳವಳಿ

(೩೦.೧೨.೨೦೦೩ ರಿಂದ ೧.೧.೨೦೦೪ರವರೆಗೆ ಪಾದಯಾತ್ರೆ ಮೂಲಕ)

೨. ಎರಡನೇ ಚಳವಳಿ

(೭.೧.೨೦೦೪ರಂದು ಎತ್ತಿನ ಬಂಡಿಯ ಮೂಲಕ ತಹಸೀಲ್ದಾರರ ಕಛೇರಿಗೆ ಮುತ್ತಿಗೆ)

೩. ಮೂರನೇ ಚಳವಳಿ

(೧೫.೧.೨೦೦೪ರಂದು ಮಲ್ಲಾಬಾದ ಏತ ನೀರಾವರಿ ಯೊಜನೆ ಜಾರಿ ಯಾವಾಗ? ಎಂದು ತಹಸೀಲ್ದಾರರ ಕಛೇರಿಗೆ ಮುತ್ತಿಗೆ)

೪. ನಾಲ್ಕನೇ ಚಳವಳಿ

(೨೧.೧.೨೦೦೪ ರಿಂದ ೩೧.೧.೨೦೦೪ ಉಪವಾಸ ಸತ್ಯಾಗ್ರಹ)

### ೧. ಮಲ್ಲಾಬಾದ ಏತ ನೀರಾವರಿಗಾಗಿ ಮೊದಲನೆ ಚಳವಳಿ

(೩೦.೧೨.೨೦೦೩ ರಿಂದ ೧.೧.೨೦೦೪ರವರೆಗೆ ಪಾದಯಾತ್ರೆ ಮೂಲಕ)

ಜೇವರ್ಗಿ ತಾಲೂಕಿನ ಮಹತ್ವಾಕಾಂಕ್ಷೆಯ ಮಲ್ಲಾಬಾದ್ ಏತ ನೀರಾವರಿ ಯೋಜನೆ ಪ್ರಾರಂಭಕ್ಕೆ ಆಗ್ರಹಿಸಿ ಈ ಬೇಡಿಕೆಯನ್ನು ಈಡೇರಿಸುವಂತೆ ಒತ್ತಾಯಿಸಿ ಜಾತ್ಯಾತೀತ ಜನತಾದಳ ಜನವರಿ ೧ ರಂದು ಜೇವರ್ಗಿ ತಹಸೀಲ್ದಾರರ ಕಛೇರಿಗೆ ಮುತ್ತಿಗೆ ಹಾಕುವ ಕಾರ್ಯಕ್ರಮವನ್ನು ಹಮ್ಮಿಕೊಂಡಿತು.

ಈ ಬೇಡಿಕೆಗಳ ಈಡೇರಿಕೆಗಾಗಿ ೩೦.೧೨.೨೦೦೩ರಿಂದ ಜೆಡಿ(ಎಸ್) ಪಕ್ಷದ ನಾಯಕರಾದ ಶ್ರೀ ಕೇದಾರಲಿಂಗಯ್ಯ ಹಿರೇಮಠ ಅವರ ನೇತೃತ್ವದಲ್ಲಿ ಮಲ್ಲಾಬಾದನಿಂದ ಬೃಹತ್ ಪಾದಯಾತ್ರೆ ಆರಂಭಿಸಲಾಯಿತು. ೩೦.೧೨.೨೦೦೩ ರಂದು ಬೆಳಿಗ್ಗೆ ೧೦ ಗಂಟೆಗೆ ಮಲ್ಲಾಬಾದದಿಂದ ಆರಂಭವಾದ ಪಾದಯಾತ್ರೆ ಆಂಬರಖೇಡ, ಬಳಬಟ್ಟೆ, ಶಿವಪೂರ, ಬಿಳವಾರ, ನೇರಡಗಿ, ಮಾರ್ಗವಾಗಿ ರಾತ್ರಿ ೯ ಗಂಟೆಗೆ ಸಾತಖೇಡ ಗ್ರಾಮದಲ್ಲಿ ವಾಸ್ತವ್ಯ ಮಾಡಲಾಯಿತು. ಪಾದಯಾತ್ರೆ ಆರಂಭಕ್ಕೆ ಮುನ್ನ ಮುಖಂಡರಾದ ಶ್ರೀ ಕೇದಾರಲಿಂಗಯ್ಯ ಹೀರೆಮಠ, ಚಂದ್ರಶೇಖರ ಹೊಸಮನಿ, ಭೀಮಾಶಂಕರ ವಿಭೂತಿ, ಎಸ್.ಎಸ್.ಸಲಗರ ಮುಂತಾದವರು ಮಾತನಾಡಿ ಮಲ್ಲಾಬಾದ ಏತ ನೀರಾವರಿ ಯೋಜನೆ ಜಾರಿಯಾಗುವವರೆಗೆ ಹೋರಾಟ ಮುಂದುವರೆಸಲಾಗುವುದು ಎಂದು ಘೋಷಿಸಿದರು.[೮]

೩೧.೧.೨೦೦೩ರಂದು ಬೆಳಿಗ್ಗೆ ಸಾತಖೇಡದಿಂದ ಪಾದಯಾತ್ರೆ ಪುನರಾರಂಭಗೊಂಡಿತು. ಇಜೇರಿ, ಸೋಮನಾಥಹಳ್ಳಿ, ಮಾರ್ಗವಾಗಿ ಹೊರಟಿರುವ ಪಾದಯಾತ್ರೆ ೩೧.೧೨.೨೦೦೩ ರಂದು ಸಾಯಂಕಾಲ ಶಾಖಾಪೂರ ಗ್ರಾಮದ ವೀರತಪೋವನ ತಲುಪಿತು. ಇಲ್ಲಿ ನಡೆದ ಬಹಿರಂಗ ಸಭೆಯನ್ನು ಉದ್ದೇಶಿ ಶ್ರೀ ಕೇದಾರಲಿಂಗಯ್ಯ ಹಿರೇಮಠ ಅವರು ಮಾತನಾಡುತ್ತ. ಕೃಷ್ಣಾ ಮೇಲ್ದಂಡೆ ಯೋಜನೆಯಿಂದ ನೀರಾವರಿ ಸೌಲಭ್ಯದಿಂದ ವಂಚಿತವಾಗಿರುವ, ಜೇವರ್ಗಿ ತಾಲೂಕಿನ ೪೦ ಗ್ರಾಮಗಳ, ೩೫ ಸಾವಿರ ಹೆಕ್ಟೇರ್ ಪ್ರದೇಶಕ್ಕೆ, ನೀರುಣಿಸುವ ಯೋಜನೆಯಾಗಿರುವ, ಮಲ್ಲಾಬಾದ ಏತ ನೀರಾವರಿ ಯೋಜನೆ ತ್ವರಿತವಾಗಿ ಅನುಷ್ಠಾನಕ್ಕೆ ತರಬೇಕು ಎಂದು ಆಗ್ರಹಿಸಿದರು.

೧.೧.೨೦೦೪ರಂದು ಬೆಳಿಗ್ಗೆ ಶಾಖಾಪುರದಿಂದ ಹೊರಡುವ ಪಾದಯಾತ್ರೆ ಜೇವರ್ಗಿ ತಲುಪಿತು. ಅಂದು ಬೆಳಿಗ್ಗೆ ೧೧ ಗಂಟೆಗೆ ಜೇವರ್ಗಿ ತಹಸೀಲ್ದಾರ್ ಕಛೇರಿಗೆ ಮುತ್ತಿಗೆ ಹಾಕುವುದರ ಮೂಲಕ ತಹಸೀಲ್ದಾರ್ ಕಛೇರಿ ಮುಂದೆ ಬಹಿರಂಗ ಸಬೆ ನಡೆಸಿದರು. ಅನಂತರ ಈ ಬೇಡಿಕೆಗಳು ಈಡೇರುವವರೆಗೆ ಆಮರಣ ಉಪವಾಸ ಸತ್ಯಾಗ್ರಹ ಪ್ರಾರಂಭಿಸುವುದಾಗಿ ಘೋಷಿಸಿದರು. ಈ ಚಳವಳಿಯಲ್ಲಿ ಸುಮಾರು ೨೦೦೦ ಜನ ರೈತರು ಭಾಗವಹಿಸಿದ್ದರು.

## ೨. ಎರಡನೇ ಚಳವಳಿ

(೭.೧.೨೦೦೪ರಂದು ಎತ್ತಿನ ಬಂಡಿಯ ಮೂಲಕ ತಹಸೀಲ್ದಾರರ ಕಛೇರಿಗೆ ಮುತ್ತಿಗೆ)

೧. ಮಲ್ಲಾಬಾದ ಏತ ನೀರಾವರಿಗೆ ಚಾಲನೆ ನೀಡಬೇಕು ಎಂದು ತಹಸೀಲ್ದಾರ್ ಕಛೇರಿ ಮುಂದೆ ದಿನಾಂಕ ೭.೧.೨೦೦೪ರಂದು ಹಮ್ಮಿಕೊಂಡಿದ್ದ ಎತ್ತಿನ ಬಂಡಿಗಳೊಂದಿಗಿನ ಅನಿರ್ಧಿಷ್ಟ ಧರಣೆಯನ್ನು ರೈತರು ಮತ್ತು ರೈತ ಹೋರಾಟಗಾರರು ರಾಜಕೀಯ ಮುಖಂಡರು, ಕಾರ್ಯಕರ್ತರು ಧರಣೆ ನಡೆಸಿದರು.[೯] ಈ ಹೋರಾಟದ ಫಲವಾಗಿ ದಿನಾಂಕ ೧೦.೦೧.೨೦೦೪ರಂದು ಗುಲ್ಬರ್ಗಾ ಜಿಲ್ಲೆ ಜೇವರ್ಗಿ ತಾಲೂಕಿನ ಇಜೇರಿ ಭಾಗದ ೪೦ ಹಳ್ಳಿಗಳ ಶೀಘ್ರದಲ್ಲೇ ನೀರಾವರಿ ಸೌಲಭ್ಯ ಕಲ್ಪಿಸುವುದಾಗಿ ಲೋಕೋಪಯೋಗಿ ಸಚಿವ ಧರ್ಮಸಿಂಗ್‌ರವರು ಭರವಸೆ ನೀಡಿದರು. ಮಲ್ಲಾಬಾದ ಏತ ನೀರಾವರಿ ಯೋಜನೆ ಮೂಲಕ ಒಂದು ಲಕ್ಷ ಹೆಕ್ಟೇರ್ ಪ್ರದೇಶಕ್ಕೆ ನೀರಾವರಿ ಸೌಲಭ್ಯ ಕಲ್ಪಿಸಲು ನಿರ್ಧರಿಸಿರುವ ಸರ್ಕಾರ, ಜೇವರ್ಗಿ

ತಾಲೂಕಿನಲ್ಲಿ ಎರಡು ಕೆರೆಗಳನ್ನು ನಿರ್ಮಿಸಿ ಕೃಷ್ಣಾ ನದಿ ನೀರನ್ನು ಸಂಗ್ರಹಿಸಲು ಉದ್ದೇಶಿಸಿದೆ ಎಂದು ಧರ್ಮಸಿಂಗ್ ಅವರು ಹೇಳಿದ್ದಾರೆ.[೧೦]

### ೩. ಮೂರನೇ ಚಳವಳಿ

(೧೫.೧.೨೦೦೪ರಂದು ಮಲ್ಲಾಬಾದ ಏತ ನೀರಾವರಿ ಯೊಜನೆ ಜಾರಿ ಯಾವಾಗ? ಎಂದು ತಹಸೀಲ್ದಾರರ ಕಛೇರಿಗೆ ಮುತ್ತಿಗೆ)

ಮಾನ್ಯ ಧರ್ಮಸಿಂಗರವರು ಭರವಸೆ ನೀಡಿದರೂ ಸಹ ಹೋರಾಟಗಾರರು ತಮ್ಮ ಪಟ್ಟು ಬಿಡದೆ ಮತ್ತೆ ೧೫.೧.೨೦೦೪ರಂದು ನೆನೆಗುದಿಗೆ ಬಿದ್ದ ಮಲ್ಲಾಬಾದ ಏತ ನೀರಾವರಿ ಯೋಜನೆ ಜಾರಿ ಎಂದು? ಜೇವರ್ಗಿ ತಾಲ್ಲೂಕಿನ ಇಜೇರಿ ಹೋಬಳಿಯ ರೈತರ ಜಮೀನಿಗೆ ನೀರಾವರಿ ಕಲ್ಪನೆ ವರದಾನವಾಗಬೇಕಿದ್ದ ಮಲ್ಲಾಬಾದ ಏತ ನೀರಾವರಿ ಯೋಜನೆ ಸರ್ಕಾರದ ಮತ್ತು ಜನಪ್ರತಿನಿಧಿಗಳ, ದಿವ್ಯ ನಿರ್ಲಕ್ಷ್ಯದಿಂದ ಮತ್ತಷ್ಟು ನೆನೆಗುದಿಗೆ ಬೀಳುತ್ತಿದೆ "ಬಿ" ಸ್ಕೀಮ್‌ನಲ್ಲಿ ಇರುವ ಮಲ್ಲಾಬಾದ್ ಏತ ನೀರಾವರಿ ಯೋಜನೆ ಜಾರಿ ಮಾಡಲು ಅದ್ಹೇಗೆ ಸಾಧ್ಯ? ಮಲ್ಲಾಬಾದ ಏತ ನೀರಾವರಿ ಯೋಜನೆಗೆ ಸುಮಾರು ೫೦೦ ಕೋಟಿ ವೆಚ್ಚವಾಗುವ ಅಂದಾಜನ್ನು ಹಿರಿಯ ಇಂಜಿನಿಯರುಗಳು ಮಾಡಿದ್ದರು.[೧೧] ಈ ಯೋಜನೆ ಜಾರಿ ಆಗುವುದು ಇದಕ್ಕೆ ಆಡಳಿತ ಪಕ್ಷದ ಜನಪ್ರತಿನಿಧಿಗಳು, ವಿರೋಧ ಪಕ್ಷಗಳ ಹೋರಾಟಗಳು ನಿರಂತರವಾಗಿ ನಡೆದಾಗ ಮಾತ್ರ ಮಾಲ್ಲಾಬಾದ ಏತ ನೀರಾವರಿ ಜಾರಿಯಾಗಲು ಸಾಧ್ಯವಾಗಬಹುದಾಗಿದೆ.

೩೦.೧.೨೦೦೪ರಂದು ಮಲ್ಲಾಬಾದ ಏತ ನೀರಾವರಿ ಯೋಜನೆ ಸಮೀಕ್ಷೆಗೆ ಆದೇಶ ನೀಡಿತು. ಜೇವರ್ಗಿ ತಾಲೂಕಿನ ನೀರಾವರಿಯಿಂದ ವಂಚಿತ ಹಳ್ಳಿಗಳಿಗೆ ನೀರಾವರಿ ಸೌಲಭ್ಯ ಕಲ್ಪಿಸುವ ಉದ್ದೇಶಿತ ಮಲ್ಲಾಬಾದ ಏತ ನೀರಾವರಿ ಯೋಜನೆ ಕುರಿತು. ತಾಂತ್ರಿಕ ಸಮೀಕ್ಷೆ ನಡೆಸಲು ರಾಜ್ಯ ಸರ್ಕಾರ ಆದೇಶ ಹೊರಡಿಸಿತು.[೧೨]

ಈ ಆದೇಶದ ಹಿನ್ನೆಲೆಯಲ್ಲಿ ಅಧಿಕಾರಿಗಳು ಕೃಷ್ಣ ಮೇಲ್ದಂಡೆ ಯೋಜನೆಯ ಜೆ.ವಿ.ಸಿ ಹಾಗೂ ಎಸ್.ಬಿ.ಸಿ. ನಾಲೆಗಳಿಂದ ನೀರಾವರಿ ವ್ಯಾಪ್ತಿಗೆ ಒಳಪಡುವ ಸುಮಾರು ೪೭ ಹಳ್ಳಿಗಳ ಒಂದು ಲಕ್ಷಕ್ಕೂ ಹೆಚ್ಚು ಹೆಕ್ಟೇರ್ ಪ್ರದೇಶಕ್ಕೆ ನೀರುಣಿಸುವ ಮಹತ್ವದ ಯೋಜನೆಗೆ ರೂಪ ರೇಷೆಗಳನ್ನು ಹೊರಡಿಸಿದನ್ನು ಸ್ವಾಗತಿಸಿದರು. ಅವರು ರೈತರ ಹೋರಾಟಕ್ಕೆ ಸಂದ ಜಯ ಎಂದರು. ಸರ್ಕಾರ ಆದಷ್ಟು ತ್ವರಿತಗತಿಯಲ್ಲಿ ತಾಂತ್ರಿಕ ಸಮೀಕ್ಷೆಯನ್ನು ಪೂರ್ಣಗೊಳಿಸಿ ನೀರಾವರಿ ಕಾಮಗಾರಿ ಪ್ರಾರಂಭಿಸಬೇಕು ಎಂದು ಶ್ರೀಕೇದಾರಲಿಂಗಯ್ಯ ಹಿರೇಮಠರವರು ಮನವಿ ಮಾಡಿದರು.

### ೪. ನಾಲ್ಕನೇ ಚಳವಳಿ

(೨೧.೧.೨೦೦೪ ರಿಂದ ೩೧.೧.೨೦೦೪ ಉಪವಾಸ ಸತ್ಯಾಗ್ರಹ)

ಮಲ್ಲಾಬಾದ್ ಏತ ನೀರಾವರಿಗಾಗಿ ಆಮರಣ ಉಪವಾಸ ಸತ್ಯಾಗ್ರಹ ಡಿಸೆಂಬರ್ ೩೦.೨೦೦೩ರಿಂದ ತಾಲೂಕಿನಲ್ಲಿ ರೈತರು ಕಾಲ್ನಡಿಗೆ, ಜಾಥಾ, ಎತ್ತು ಬಂಡಿಯೊಂದಿಗೆ ತಹಸೀಲ್ದಾರ್ ಕಛೇರಿಗೆ ಮುತ್ತಿಗೆಯಾಕಿದರೂ ಫಲಕಾರಿಯಾಗದ ಕಾರಣ ಸರ್ಕಾರದ ವಿರುದ್ಧ ಜನವರಿ ೨೧ ೨೦೦೪ರಿಂದ

ಆಮರಣ ಉಪವಾಸ ಸತ್ಯಾಗ್ರಹ ಹಮ್ಮಿಕೊಳ್ಳಲಾಗಿತ್ತು. ಈ ಕಾರ್ಯಕ್ರಮ ೩೧ ಜನವರಿ ೨೦೦೪ರವರೆಗೆ ಉಪವಾಸ ಸತ್ಯಾಗ್ರಹ ನಡೆಯಿತು. ಈ ಕಾರ್ಯಕ್ರಮದಿಂದ ಜಿಲ್ಲಾಡಳಿತಕ್ಕೆ ನುಂಗಲಾರದ ತುತ್ತಾಗಿ ಪರಿಗಣಮಿಸಿತು. ಏಕೆಂದರೆ ಫೆಬ್ರವರಿ ೩ ೨೦೦೪ರಂದು ಶ್ರೀಮಾನ್ಯ ಮುಖ್ಯಮಂತ್ರಿಗಳು ಜೇವರ್ಗಿ ತಾಲೂಕಿನಲ್ಲಿಯೇ ವಿವಿಧ ಕಾಮಗಾರಿಗಳನ್ನು ಉದ್ಘಾಟಿಸುವ ಕಾರ್ಯಕ್ರಮ ನಿಗಧಿಯಾಗಿತ್ತು. ಇದಲ್ಲದೆ ಚಳವಳಿಕಾರರು ಮುಖ್ಯಮಂತ್ರಿಗಳಿಗೆ ಘೇರಾವ್ ಹಾಕುತ್ತೇವೆ ಎಂದು ಘೋಷಿಸಿದರು. ಇದರಿಂದ ಜಿಲ್ಲಾಡಳಿತ ಎಚ್ಚೆತ್ತುಕೊಂಡು ಚಳವಳಿಕಾರರ ಪ್ರಮುಖ ಬೇಡಿಕೆಗಳನ್ನು ಈಡೇರಿಸುವುದಾಗಿ ಭರವಸೆ ನೀಡಿದರು. ಈ ಹಿನ್ನೆಲೆಯಲ್ಲಿ ಚಳವಳಿಗಾರರು ಆಮರಣ ಉಪವಾಸ ಸತ್ಯಾಗ್ರಹವನ್ನು ಸ್ಥಗಿತಗೊಳಿಸಿದರು.[೧೯]

### ಸರ್ವೆ, ಕಾರ್ಯ ಆರಂಭ ಮತ್ತು ಭೂಮಿ ಪೂಜೆ

ಜೇವರ್ಗಿ ತಾಲೂಕಿನಾದ್ಯಂತ ತೀವ್ರತರವಾದ ಹೋರಾಟಗಳಿಂದ ಮನವರಿಕೆ ಮಾಡಿಕೊಂಡ ರಾಜ್ಯಸರ್ಕಾರ. ೨೦೦೫-೦೬ರ ಬಜೇಟಿನಲ್ಲಿ ಶ್ರೀ ಸಿದ್ಧರಾಮಯ್ಯ ಉಪಮುಖ್ಯ ಮಂತ್ರಿ ಹಾಗೂ ಹಣಕಾಸು ಮಂತ್ರಿಯಾಗಿದ ಕಾಲದಲ್ಲಿ. ಮಲ್ಲಾಬಾದ ಏತ ನೀರಾವರಿಗೆ ಸರ್ವೆ ಮಾಡಲು ೫ ಕೋಟಿ ರೂಪಾಯಿಗಳು ಬಜೇಟಿನಲ್ಲಿ ಮಂಡಿಸಿದರು. ಇದು ನಿರಂತರ ರೈತರ ಹೋರಾಟ ಫಲವಾಗಿದೆ. ಈ ಯೋಜನೆಯ ೫ಕೋಟಿ ರೂಪಾಯಿಗಳು ಬಿಡುಗಡೆ ಮಾಡಿದ ನಂತರ ಸರ್ವೆ ಕಾರ್ಯವನ್ನು ಸರ್ಕಾರ ತ್ವರಿತ ಗತಿಯಲ್ಲಿ ಪ್ರಾರಂಭ ಮಾಡಿತು. ನಂತರ ಸರ್ಕಾರಕ್ಕೆ ಈ ವರದಿಯನ್ನು ಮುಟ್ಟಿಸ್ತು. ಈ ವರದಿ ಮುಟ್ಟಿದ ಕೂಡಲೆ ಮತ್ತೆ ರೈತ ಹೋರಾಟಗಳು ಪ್ರಾರಂಭವಾದವು. ಅಂದರೆ ಕಾಮಗಾರಿ ಪ್ರಾರಂಭಿಸುವಂತೆ. ಈ ಹೋರಾಟಕ್ಕೆ ರೈತರು, ರೈತ ಸಂಘಟನೆಗಳು, ರಾಜಕೀಯ ಪಕ್ಷಗಳು, ಜನಸಾಮಾನ್ಯರು, ಮಹಿಳೆಯರು, ಮಠಾಧೀಶರು, ಮೊದಲಾದ ಜನರು ಭಾಗವಹಿಸಿದರು. ರೈತ ಹೋರಾಟದ ಮುಖಾಂತರ ತಾಲ್ಲೂಕು ಕಛೇರಿ, ಹಾಗೂ ಜಿಲ್ಲಾ ಮಟ್ಟದಲ್ಲಿ ಭಾರಿ ಪ್ರಮಾಣದ ಪ್ರತಿಭಟನೆ, ಉಪವಾಸ, ಆಮರಣ, ಸತ್ಯಾಗ್ರಹ ಪ್ರಾರಂಭವಾದವು.

ಈ ಸರ್ವೆ ವರದಿಯನ್ನು ಬೇಗನೆ ಸರ್ಕಾರ ಕೈಗೆತ್ತಿಕೊಳ್ಳಬೇಕು. ಮಲ್ಲಾಬಾದ ಏತನೀರಾವರಿ ಕಾಮಗಾರಿಯನ್ನು ಚಾಲನೆ ನೀಡಬೇಕು. ಈ ಭಾಗದ ರೈತರಿಗೆ ಬೇಗನೆ ನೀರಾವರಿ ಕಲ್ಪಿಸಬೇಕು ಎಂದು ಒತ್ತಾಯಿಸಿ ತಾಲೂಕ ಕಛೇರಿಗೆ ಮುತ್ತಿಗೆ ಹಾಕುವುದರ ಮೂಲಕ ಹೋರಾಟ ಮಾಡಿದರು. ಈ ಹೋರಾಟಗಳ ಫಲವಾಗಿ ಮಲ್ಲಾಬಾದ ಏತ ನೀರಾವರಿ ಕಾಮಗಾರಿಯನ್ನು ಪ್ರಾರಂಭ ಮಾಡಲು ಸರ್ಕಾರ ೨೦೦೮-೦೯ರ ಸಾಲಿನಲ್ಲಿ ೪೨ಕೋಟಿ ರೂಪಾಯಿಗಳ ಮೊತ್ತದ ಟೆಂಡರ್ ಕರೆಯಲಾಗಿದೆ. ಇಂದು ಈ ಕಾಮಗಾರಿಗೆ ಭೂಮಿ ಪೂಜೆಗೆ ಚಾಲನೆ ದೊರತಿದೆ. ಈ ನೀರಾವರಿಗಾಗಿ ಹೋರಾಟ ಮಾಡಿದ ರೈತರು, ರೈತ ಸಂಘಟನೆಗಳು, ರಾಜಕೀಯ ಪಕ್ಷಗಳು, ಮಹಿಳೆಯರು, ಮಠಾಧೀಶರಿಗೆ ಬಾರಿ ಸಂತೋಷ ತಂದಿದೆ. ಏಕೆಂದರೆ ನಿರಂತರ ಹೋರಾಟದ ಫಲ ಇದಾಗಿದೆ ಎಂದು ಕೇದಾರಲಿಂಗಯ್ಯ ಹಿರೇಮಠ, ಚಂದ್ರಶೇಖರ ಹೊಸಮನಿ, ಹಾಗೂ ಸಮಸ್ತ ಮಲ್ಲಾಬಾದ ಗ್ರಾಮಸ್ಥರು, ಮತ್ತು ರೈತ ಬಾಂಧವರು ಸ್ವಾಗತಿಸಿದ್ದಾರೆ.

೨.೧.೨೦೦೩ರಂದು ರೈತರು ಕಳೆದ ಇಪ್ಪತ್ತು ಇಪ್ಪತ್ತೈದು ವರ್ಷಗಳ ಬೇಡಿಕೆಯಾದ ಇಟಗೆ ಗಾಣಗಾಪೂರ ಬ್ರಿಜ್ ಕಮ್ ಬ್ಯಾರೇಜ್ ಕಾಮಗಾರಿಗೆ ೩ ವರ್ಷಗಳ ಹಿಂದೆಯೇ ಟೆಂಡರ್ ಕರೆಯಲಾಗಿದ್ದರೂ ಇದುವರೆಗೆ ಕಾಮಗಾರಿ ಪ್ರಾರಂಭಿಸಿರುವುದಿಲ್ಲ ಈ ಕಾಮಗಾರಿ ಟೆಂಡರ್ ರದ್ದು ಪಡಿಸಿ ಕೃಷ್ಣಾ ಮೇಲ್ದಂಡೆ ಯೋಜನೆಯಿಂದ ಟೆಂಡರ್ ಕರೆದು ಕಾಮಗಾರಿಯನ್ನು ಆರಂಭಿಸಬೇಕು. ತಾಲ್ಲೂಕಿನ ಅಂಕಲಗಿ, ನೆಲೋಗಿ, ಆಂದೋಲಾ, ಇಜೇರಿ ರೈತರು ಜನವರಿ ೨ರಂದು ಬೆಳಿಗ್ಗೆ ೧೨ ಗಂಟೆಯಿಂದ ತಹಸೀಲ್ದಾರ್ ಕಛೇರಿ ಮುಂದೆ ನೂರಾರು ಜನರೈತರು ಎತ್ತು ಬಂಡೆಗಳು, ದನಕರುಗಳ ಸಮೇತ ಅನಿರ್ಧಿಷ್ಟಾವಧಿ ಧರಣಿ ಸತ್ಯಾಗ್ರಹ ನಡೆಸಿದರು.[೪೯]

೬.೧.೨೦೦೪ ರಂದು ಮತ್ತೆ ಈ ಯೋಜನೆಯ ಅಂದರೆ ಇಟಗಿ ಗಾಣಗಾಪೂರ ಬ್ರಿಜ್‌ಕಮ್ ಬ್ಯಾರೇಜ್ ಮತ್ತು ಕೋನಾಹಿಪ್ಪರಗಿ ಸರಡಗಿ ಬ್ಯಾರೇಜ್ ನಿರ್ಮಿಸುವಂತೆ ಮತ್ತೆ ರೈತರು ಹೋರಾಟ ಪ್ರಾರಂಭವಾಯಿತ್ತು ಈ ಹೋರಾಟದಲ್ಲಿ ಬೃಹತ್ ಪ್ರಮಾಣದಲ್ಲಿ ರೈತರು ಭಾಗವಹಿಸಿದರು.[೫೦]

೬.೫.೨೦೦೫ರಂದು ರೈತರ ಹಲವಾರು ಬೇಡಿಕೆಗಳ ಈಡೇರಿಕೆಗೆ ಒತ್ತಾಯಿಸಿ ಕರ್ನಾಟಕ ಪ್ರಾಂತ ರೈತ ಸಂಘ ಜೇವರ್ಗಿ ಘಟಕದ ಕಾರ್ಯಕರ್ತರು ಇಲ್ಲಿನ ತಹಸೀಲ್ದಾರರಿಗೆ ಶುಕ್ರವಾರ ಮುತ್ತಿಗೆ ಹಾಕಿ ಪ್ರತಿಭಟಿಸಿದು. ಕೃಷ್ಣಾ ಭಾಗ್ಯ ಜಲನಿಗಮ ಜೆ.ಬಿ.ಸಿ ವ್ಯಾಪ್ತಿಯಲ್ಲಿ ಬರುವ ನೀರಲಕೋಡ, ಹೇಗಿನಾಳ, ಹಂಚಿನಾಳ, ಮಾವನೂರ, ಹಂಗರಗಿ, ಕೊಟನೂರ, ಕೋಡಿಕೋಬಾಳ ಗ್ರಾಮಗಳ ಜಮೀನನ್ನು ನೀರಾವರಿಗೆ ಒಳಪಡಿಸಲಿರುವ ಕಾಲುವೆ ಕಾಮಗಾರಿ ಶೀಘ್ರು ಪೂರ್ಣ ಮಾಡಬೇಕು, ಅಪೂರ್ಣ ಆಗಿರುವ ಇಜೇರಿ, ನೀಲಕೋಡ ಹಾಗೂ ಹೇಗಿನಾಳ ಈ ವ್ಯಾಪ್ತಿಯಲ್ಲಿ ನೀರಾವರಿ ಕಲ್ಪಿಸುವಂತೆ ಆಗ್ರಹಿಸಿ ಕಛೇರಿಗೆ ರೈತರು ಮುತ್ತಿಗೆ ಹಾಕಿದ್ದರು.[೫೧]

೨೭.೧೦.೨೦೦೬ರಂದು ನೀರಾವರಿ ಇಲಾಖೆ ಅಧಿಕಾರಿಗಳ ಕಾರ್ಯ ವೈಖರಿಯನ್ನು ಸರಿಪಡಸಲು, ಸರಕಾರದ ಮೇಲೆ ಒತ್ತಡ ಹೇರಬೇಕೆಂದು ಒತ್ತಾಯಿಸಿ ಭೀಮರಾಯನಗುಡಿಯಲ್ಲಿ ಪ್ರತಿಪಕ್ಷ ನಾಯಕ ಧರ್ಮಸಿಂಗ ಅವರಿಗೆ ಜೇವರ್ಗಿ ತಾಲೂಕಿನ ನೂರಾರು ರೈತರು ಹಾಗೂ ಕರ್ನಾಟಕ ಪ್ರಾಂತ ರೈತ ಸಂಘದ ಪದಾಧಿಕಾರಿಗಳು ಮುತ್ತಿಗೆ ಹಾಕಿದರು.[೫೨]

ಜೆ.ಬಿ.ಸಿ. ಕಾಲುವೆ ಕಾಮಗಾರಿ ಅರ್ಧಕ್ಕೆ ನಿಂತಿದ್ದು ಸಮರ್ಪಕವಾಗಿ ನೀರು ವಿತರಣೆಯಾಗುತ್ತಿಲ್ಲ. ನೀರಾವರಿ ಪ್ರದೇಶದಲ್ಲಿ ಬೆಳೆದ ತೊಗರಿ ಹಾಗೂ ಹತ್ತಿ ಬೆಳೆಗಳು ನಾಶವಾಗಿದೆ. ರೈತನೊಬ್ಬ ಆತ್ಮಹತ್ಯೆ ಮಾಡಿಕೊಂಡಿದ್ದಾನೆ ಎಂದು ಪ್ರಮುಖರ ಅಪಾದಿಸಿದರು. ಹೀಗೆ ನೀರಾವರಿಗಾಗಿ ಹಲವಾರು ಹೋರಾಟಗಳನ್ನು ಮಾಡಿ ನೀರಾವರಿಯ ಮಹತ್ವವನ್ನು ರೈತರು ಪಡೆಯುವಲ್ಲಿ ಫಲ ದೊರಕಿರುವುದು ಹೋರಾಟದ ಹಿನ್ನೆಲೆ ಎಂದು ಹೇಳಬಹುದು.

### ೪.೩. ವಿದ್ಯುತ್ ಸಂಬಂಧ ಚಳವಳಿ

ಗ್ರಾಮಾಂತರ ವಿದ್ಯುತ್‌ಚ್ಛಕ್ತಿ ಕರ ಹಾಗೂ ನೀರಾವರಿ ಪಂಪಸೆಟ್ಟುಗಳಿಗೆ ಕರ ವಿಧಿಸುವ ಹಾಗೂ ಒಟ್ಟಾರೆ ಬೆಲೆ ಏರಿಕೆ ಬಗ್ಗೆ ಸರ್ಕಾರ ಕಾನೂನು ಬಾಹಿರ ಕ್ರಮಗಳನ್ನು ಅನುಸರಿಸಿತ್ತು. ಗ್ರಾಮಾಂತರ

ವಿದ್ಯುಚ್ಛಕ್ತಿ ಸರಬರಾಜಿನ ಆಧುನೀಕರಣಕ್ಕೆ ಹಣಬೇಕೆಂದು ಭವಿಷ್ಯದಲ್ಲಿ ಸಮರ್ಪಕ ಸರಬರಾಜಿನ ಆಶ್ವಾಸನೆ ಆಧಾರದ ಮೇಲೆ ಮಾಡುವ ಕರ ಆಕರಣೆ ಅವೈಜ್ಞಾನಿಕವಲ್ಲದೆ ಕಾನೂನು ಬಾಹಿರ ಸೇವಾ ತೆರಿಗೆಯೇ ಆಗಿತು. ಮೊದಲು ಸಮರ್ಪಕ ಸರಬರಾಜಿನ ವ್ಯವಸ್ಥೆ ಮಾಡಿ ರೈತರ ಪಂಪಸೆಟ್ಟುಗಳು ಸುಟ್ಟು ಹೋಗದಂತೆ ಹಾಗೂ ರೈತರ ಬೆಳೆಗಳು ಹಾಳಾಗದಂತೆ ವಿದ್ಯುಚ್ಛಕ್ತಿ ಸರಬರಾಜು ಮಾಡುವರೆಗೂ ತೆರಿಗೆ ಪಾವತಿ ಮಾಡಬಾರದು. ಅದಕ್ಕೆ ಸಂಬಂಧಿಸಿದಂತೆ ಸರ್ಕಾರ ರೈತರೊಂದಿಗೆ ಕರಾರನ್ನು ಮಾಡಿಕೊಳ್ಳುವರೆಗೂ ಸಾಧ್ಯವಿಲ್ಲವೆಂಬುದು ಕರನಿರಾಕರಣೆ ಚಳವಳಿಯ ಉದ್ದೇಶವಾಗಿತ್ತು. ವಿದ್ಯುಚ್ಛಕ್ತಿ ಚಳವಳಿ ವಿಸ್ತರಣೆಯನ್ನು ೧೯೯೭ರಿಂದ ೨೦೦೧ರವರೆಗೆ ಮುಂದುವರಿಸಿಕೊಂಡು ಬಂದರು. ಇದರ ಜೊತೆಗೆ ರಾಜ್ಯಾದ್ಯಾಂತ ಅಕ್ಕಿ ಬೇಳೆ ಚಳವಳಿ ಮಾಡುವುದಾಗಿ ಮಾರುತಿ ಮಾನ್ಪಡೆ ಅವರು ಪತ್ರಿಕಾ ಹೇಳಿಕೆ ನೀಡಿದರು. ವಿದ್ಯುತ್ ಸರಬರಾಜಿನಲ್ಲಿ ಗ್ರಾಮಾಂತರ ಪ್ರದೇಶಕ್ಕೆ ಎಲ್ಲಾ ರೀತಿಯ ತಾರತಮ್ಯ ನೀತಿಯನ್ನು ಮುಂದುವರೆಸಿ ಶುಲ್ಕವನ್ನು ಹೆಚ್ಚಿಸಿದ ಸರ್ಕಾರದ ವಿರುದ್ಧ ಈ ಬಗ್ಗೆಯ ಚಳವಳಿಯನ್ನು ಹಮ್ಮಿಕೊಂಡರು.

## ಗುಲಬರ್ಗಾದಲ್ಲಿ ವಿದ್ಯುತ್ ಸಂಬಂಧ ಚಳವಳಿ ರೈತರ ಮೇಲೆ ಲಾಠಿ ಪ್ರಹಾರ

೨೯.೧೨.೨೦೦೧ರಂದು ಕೃಷಿಗೆ ನಿರಂತರ ವಿದ್ಯುತ್ ಪೂರೈಸಬೇಕು ಹಾಗೂ ಮತ್ತಿತರ ಬೇಡಿಕೆಗಳ ಪೂರೈಕೆಗೆ ಒತ್ತಾಯಿಸಿ ಕರ್ನಾಟಕ ಪ್ರಾಂತ ರೈತ ಸಂಘ ಮತ್ತು ರಾಜ್ಯ ರೈತ ಸಂಘ (ಪುಟ್ಟಣ್ಣಯ್ಯ) ವಿದ್ಯುತ್ ಪಂಪ್‌ಸೆಟ್ ಬಳಕೆದಾರರ ಸಂಘ, ಹಾಗೂ ಜಿಲ್ಲಾ ಅಭಿವೃದ್ಧಿ ಹೋರಾಟ ಸಮಿತಿ, ಇತ್ಯಾದಿ ರೈತ ಸಂಘಟನೆಗಳು ಗುಲಬರ್ಗಾ ಕೆಪಿಟಿಸಿಎಲ್ ಕಛೇರಿಗೆ ಮುತ್ತಿಗೆ ಹಾಕಲು ತೀರ್ಮಾನಿಸಿ ಚಳವಳಿಗೆ ಕರೆ ಕೊಟ್ಟಿದ್ದವು. ಇದಕ್ಕಾಗಿ ಜಿಲ್ಲೆಯ ನಾನಾ ಕಡೆಗಳಿಂದ ಸಹಸ್ರಾರು ರೈತರು ಬಂದು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮದ ಕಛೇರಿಗೆ ನುಗ್ಗಲು ಪ್ರಯತ್ನಿಸಿದರು. ಅವರನ್ನು ತಡೆಯಲೆತ್ನಿಸಿದಾಗ ಪೊಲೀಸರ ಮತ್ತು ರೈತರ ಮಧ್ಯೆ ಗಲಭೆ ಆರಂಭವಾಯಿತು. ರೈತರನ್ನು ಚದುರಿಸಲು ಪೊಲೀಸರು ಲಾಠಿ ಚಾರ್ಜ್ ಮಾಡಿದರು. ನಿಗಮದ ಕಛೇರಿ ಎದುರಿನ ಕಟ್ಟಡಗಳಿಂದ ನುಗ್ಗಿದ ರೈತರು ಪೊಲೀಸರ ಮೇಲೆ ಕಲ್ಲು ತೂರಿದಾಗ ಐಪಿಎಸ್ ಅಧಿಕಾರಿಯೂ ಸೇರಿದಂತೆ ೧೪ ಜನ ಪೊಲೀಸರು ತೀವ್ರವಾಗಿ ಗಾಯಗೊಂಡರು. ಐದು ಪೊಲೀಸ್ ವಾಹನಗಳು ಪೂರ್ಣ ಜಖಂ ಆದವು. ೫೦ಕ್ಕೂ ಹೆಚ್ಚು ರೈತರು ಗಾಯಗೊಂಡರು. ಕೆಲವರ ಸ್ಥಿತಿ ಗಂಭೀರವಾಗಿತು. ತಮ್ಮ ವಾಹನಗಳಲ್ಲಿ ಮೊದಲು ರಕ್ಷಣೆ ಪಡೆಯಲೆತ್ನಿಸಿದ ಪೊಲೀಸರು ನಂತರ ಬಿದ್ದ ಕಲ್ಲುಗಳನ್ನೇ ರೈತರ ಮೇಲೆ ಬೀಸುತ್ತ ನಂತರ ಲಾಠಿ ಪ್ರಹಾರ ಮಾಡಿದರು. ಪರಿಸ್ಥಿತಿ ಹತೋಟಿಗೆ ಬರದಿದ್ದಾಗ ಗಾಳಿಯಲ್ಲಿ ಆರು ಸುತ್ತು ಗುಂಡು ಹಾರಿಸಲಾಯಿತು. ಅಶ್ರುವಾಯು ಷೆಲ್‌ಗಳನ್ನು ಸಿಡಿಸಲಾಯಿತು. ಈ ಸುದ್ದಿ ಹರಡಿದಂತೆ ಸರ್ದಾರ್ ವಲ್ಲಭಬಾಯಿ ಪಟೇಲ್ ವೃತ್ತದಿಂದ ಜಗತ್ ವೃತ್ತದವರೆಗೆ ಎಲ್ಲಾ ಅಂಗಡಿ ಮುಂಗಟ್ಟುಗಳನ್ನು ಬಂದ್ ಮಾಡಲಾಯಿತು. ಇಡೀ ರಸ್ತೆ, ಕಲ್ಲು ಮತ್ತು ಒಡೆದ ಗಾಜುಗಳಿಂದ ತುಂಬಿದ ದೃಶ್ಯವಾಗಿತ್ತು. ಹಿಂಸೆಗೆ ಪ್ರಚೋದಿಸಿದ ಆರೋಪದ ಮೇಲೆ ಪ್ರಾಂತ ರೈತ ಸಂಘದ ಅಧ್ಯಕ್ಷ ಮಾರುತಿ ಮಾನ್ಪಡೆ ಸೇರಿದಂತೆ ೪೭ ರೈತರನ್ನು ಬಂಧಿಸಲಾಯಿತು.[೧೯]

ರೈತರ ಮೇಲೆ ವಿನಾಕಾರಣ ಲಾಠಿ ಪ್ರಹಾರ ಮಾಡಿದರೆಂದರೆ ಆ ಘಟನೆಯ ವಿರುದ್ಧ ಪ್ರತಿಭಟನೆಯನ್ನು ಮರುದಿನ ಮಂಗಳವಾರ ಬಾಯಿಗೆ ಕಪ್ಪು ಬಟ್ಟೆ ಕಟ್ಟಿಕೊಂಡು ನಗರದ ಮುಖ್ಯ ರಸ್ತೆಯಲ್ಲಿ ರೈತರು ಮೌನಮೆರವಣಿಗೆ ನಡೆಸಿದರು. ರೈತರ ಮೇಲಿನ ಲಾಠಿ ಪ್ರಹಾರಕ್ಕೆ ಪ್ರಮುಖ ಕಾರಣಕರ್ತರಾದ ಅಶೋಕನಗರ ಠಾಣೆಯ ಪಿ.ಎಸ್.ಐ. ಮತ್ತು ಕಸ್ಟಡಿಯಲ್ಲಿದ್ದ ರೈತ ಧುರೀಣರನ್ನು ಸಿಕ್ಕಾಪಟ್ಟೆ ಹೊಡೆದಿರುವ ಸ್ಟೇಷನ್ ಬಜಾರ್ ಠಾಣೆಯ ಪಿ.ಎಸ್.ಐ ಅವರನ್ನು ಅಮಾನತು ಮಾಡಬೇಕು ಎಂದು ಬೇಡಿಕೆ ಇಟ್ಟು ಪ್ರತಿಭಟನಾ ಮೆರವಣಿಗೆಕಾರ ರೈತರು ಸರ್ಕಾರದ ವಿರುದ್ಧ ಘೋಷಣೆಗಳನ್ನು ಕೂಗಿದರು. ವಿಧಾನ ಪರಿಷತ್ ಮಾಜಿ ಉಪಸಭಾಪತಿ ಶ್ರೀ ವಿ.ಆರ್.ಹಣಮಂತರಾವ್ ದೇಸಾಯಿ, ಎಸ್.ಕೆ.ಕಾಂತಾ ಮುಂತಾದವರು ಮೆರವಣಿಗೆಯ ಮುಂಚೂಣಿಯಲ್ಲಿದ್ದರು. ರೈತ ಸಮೂಹವನ್ನು ಉದ್ದೇಶಿಸಿ ಮಾತನಾಡಿದರು. ಆನಂತರ ಹೋರಾಟಗಾರರು ಜಿಲ್ಲಾಧಿಕಾರಿಗಳಿಗೆ ಮನವಿಸಲ್ಲಿಸಿ ನಿರಂತರ ವಿದ್ಯುತ್ ಪೂರೈಕೆಗೆ ಕ್ರಮತೆಗೆದುಕೊಳ್ಳಬೇಕು, ಪಂಪಸೆಟ್‌ಗಳಿಗೆ ಮೀಟರ್ ಅಳವಡಿಸಬಾರದು, ಬಂಧಿತ ರೈತರನ್ನು ಬಿಡುಗಡೆ ಮಾಡಬೇಕು ಎಂದು ಆಗ್ರಹಿಸಿದರು.[೯]

೫.೧೨.೨೦೦೧ರಂದು ವಿಧಾನಸಭೆಯ ಪ್ರತಿ ಪಕ್ಷದ ನಾಯಕ ಶ್ರೀ ಜಗದೀಶ್ ಶೆಟ್ಟರ್ ಅವರು ಕೆಪಿಟಿಸಿಎಲ್ ಶೇ. ೧೨ರಷ್ಟು ದರವರಿಸಲು ನಿರ್ದೇಶನಗಳನ್ನು ನೀಡಿತ್ತು. ಕೆಪಿಟಿಸಿಎಲ್ ಅದನ್ನು ಪಾಲಿಸಿಲ್ಲ. ಹಾಗೂ ಅದು ಸಲ್ಲಿಸಿರುವ ಅವೈಜ್ಞಾನಿಕ ದರ ಏರಿಕೆ ಪ್ರಸ್ತಾವನೆಯನ್ನು ಕೂಡಲೇ ಕೈಬಿಡಬೇಕೆಂದು ಮುಖ್ಯಮಂತ್ರಿಗಳಲ್ಲಿ ಆಗ್ರಹಿಸಿದರು.

೧೨.೧೨.೨೦೦೧ರಂದು ರಾಜ್ಯ ಸರ್ಕಾರ ಗ್ರಾಮೀಣ ಪ್ರದೇಶಕ್ಕೆ ಸತತ ೧೮ ಗಂಟೆಗಳ ಕಾಲ ವಿದ್ಯುತ್ ಒದಗಿಸುವಲ್ಲಿ ವಿಳಂಬ ನೀತಿ ಅನುಸರಿಸಿದರೆ ಬೆಂಗಳೂರು, ಹುಬ್ಬಳಿ, ಧಾರವಾಡ ಹಾಗೂ ರಾಜ್ಯದ ಪ್ರಮುಖ ನಗರಗಳನ್ನು ಕತ್ತಲೆಗೊಳಿಸುವ ಕಾರ್ಯಕ್ರಮವನ್ನು ಜನವರಿ ತಿಂಗಳಲ್ಲಿ ಹಮ್ಮಿಕೊಳ್ಳುವುದೆಂದು ರಾಜ್ಯ ರೈತ ಸಂಘದ ಅಧ್ಯಕ್ಷ ಪ್ರೊ.ಎಂ.ಡಿ.ನಂಜುಂಡಸ್ವಾಮಿಯವರು ಪತ್ರಿಕಾ ಗೋಷ್ಠಿಯಲ್ಲಿ ತಿಳಿಸಿದರು. ರಾಜ್ಯ ಸರ್ಕಾರ ತನ್ನ ವರದಿಯಲ್ಲಿಯೇ ಶೇ. ೩೦ರಷ್ಟು ವಿದ್ಯುತ್ ಸೋರಿಕೆಯಾಗುತ್ತಿದೆ ಎಂದಿರುವಲ್ಲಿ ಅದನ್ನು ಶೋಧಿಸಿ ಕ್ರಮತೆಗೆದುಕೊಳ್ಳಬೇಕು ಎಂದರು.

ನೀರಾವರಿ ಪಂಪಸೆಟ್‌ಗಳಿಗೆ ಕಳೆದ ೨೦೦೧ ಮಾರ್ಚ್ ತಿಂಗಳಲ್ಲಿ ಶುಲ್ಕ ನಿಗದಿ ಪಡಿಸಿ ಕೆಪಿಟಿಸಿಎಲ್ ಹೊರಡಿಸಿರುವ ಆದೇಶ ತಾರತಮ್ಯದಿಂದ ಕೂಡಿದೆ ಎಂದು ಗುಲಬರ್ಗಾ ಜಿಲ್ಲೆಯ ರೈತರು ಆಕ್ರೋಶ ವ್ಯಕ್ತಪಡಿಸಿದ್ದಾರೆ. ಕೃಷಿಕರನ್ನು ಎರಡು ವರ್ಗವಾಗಿ ವಿಭಾಗಿಸಲಾಗಿದೆ. ೨ ನೀರಾವರಿ ಪಂಪಸೆಟ್ ೪ ಚಕ್ರವಾಹನ ದೂರವಾಣಿ ಮತ್ತು ಮೊಬೈಲ್ ಹೊಂದಿರುವವರು ಸಾಮಾನ್ಯ ದರಕ್ಕಿಂತ ಹೆಚ್ಚು ಶುಲ್ಕ ತೆರಬೇಕು. ಎಲ್.ಟಿ ೪ಎ ಮತ್ತು ಎಲ್.ಡಿ ೪ ಬಿ ಎಂದು ರೈತರನ್ನು, ವಿಂಗಡಿಸಿ ವಿದ್ಯುತ್‌ದರ ನಿಗದಿ ಪಡಿಸುವ ಮುನ್ನ ಕೆಪಿಟಿಸಿಎಲ್ ತಜ್ಞರ ಅಭಿಪ್ರಾಯ ಪಡೆದಿಲ್ಲ. ರೈತರು ವ್ಯವಸಾಯಕ್ಕೆ ಬಳಸುವ ವಿದ್ಯುತ್ ಪ್ರಮಾಣದ ಆಧಾರದ ಮೇಲೆ ಶುಲ್ಕ ನಿಗದಿಯಾಗಬೇಕು. ಆದರೆ

ಕೆಪಿಟಿಸಿಎಲ್ ಅದಕ್ಕೆ ಮೀಟರುಗಳನ್ನು ಬಳಸದಿರುವುದು ಆಶ್ಚರ್ಯ ಎಂದು ರೈತ ಸಂಘ ಅಹವಾಲು ಸಮಿತಿಗೆ ಪತ್ರ ಬರೆದಿದೆ. ರೈತರಿಗೆ ಸರಬರಾಜು ಮಾಡುವ ಪ್ರತಿ ಯೂನಿಟ್ ವಿದ್ಯುತ್ತಿಗೆ ೫೦ ಪೈಸೆ ದರ ನಿಗದಿಪಡಿಸಬೇಕು. ಬರ, ಹವಾಮಾನದ ಏರುಪೇರು. ಅನಾವೃಷ್ಟಿಯಿಂದ ೧೯೭೨ರಿಂದಲೂ ಬರೆದ ದವಡೆಗೆ ಸಿಲುಕಿರುವ ರಾಜ್ಯದ ಉತ್ತರ ಭಾಗದ ಜಿಲ್ಲೆಗಳ ಬೇಳೆ ಹಾಳಾಗಿದೆ. ಸಿಂಗಲ್ ಪೇಸ್ ಹಾಗೂ ಮೂರು ಪೇಸ್ ವಿದ್ಯುತ್ ಸರಬರಾಜಿನಿಂದ ಕಬ್ಬು ಹಾಗೂ ಭತ್ತದ ಬೆಳೆಗೆ ನೀರು ಪೂರೈಸಲು ಸಾಧ್ಯವಾಗದು. ಅದಕ್ಕಾಗಿ ಇಲ್ಲಿನ ರೈತರು ಎರಡು ನೀರಾವರಿ ಪಂಪಸೆಟ್‌ಗಳನ್ನು ಹೊಂದಿದ್ದಾರೆ. ವಿದ್ಯುತ್ ಅನ್ನು ಸುಸೂತ್ರ ಒದಗಿಸಿದರೆ ೨ ಪಂಪಸೆಟ್‌ನ ಅಗತ್ಯವೆ ಇರದು ಎಂದು ರೈತ ಸಂಘ ಹೇಳಿದೆ. ಕೇರಳ, ಪಂಜಾಬ್ ಹಾಗೂ ತಮಿಳುನಾಡುಗಳಲ್ಲಿ ನೀರಾವರಿ ಪಂಪಸೆಟ್‌ಗಳಿಗೆ ಉಚಿತವಾಗಿ ವಿದ್ಯುತ್ ಕಲ್ಪಿಸಿರುವಂತೆ ನಮ್ಮಲ್ಲಿ ಏಕೆ ಆ ಪದ್ಧತಿ ಅನುಸರಿಸುತ್ತಿಲ್ಲ ಎಂಬುದು ರೈತ ಸಂಘದ ಪ್ರಶ್ನೆ. ಕೆಪಿಟಿಸಿಎಲ್ ನಿಗದಿ ಪಡಿಸಿರುವ ಶುಲ್ಕವು ವೈಜ್ಞಾನಿಕವೆನಿಸದೆ ರೈತರಿಗೆ ದುಬಾರಿ ಎನಿಸಿದೆ. ಹೀಗಾಗಿ ಆಳಂದ, ಅಫಜಲಪುರ, ಚಿತ್ತಾಪುರ, ಸೇಡಂ, ಜೇವರ್ಗಿ, ಚಿಂಚೋಳಿ ಜಿಲ್ಲೆಯ ರೈತರು ತಮ್ಮ ಸಂಕಷ್ಟವನ್ನು ಪರಿಹರಿಸುವ ಸಲುವಾಗಿ ಹೋರಾಟಕ್ಕೆ ದುಮುಕಿದರು.



೨೧.೧೨.೨೦೦೧ರಂದು ರೈತ ಚಳವಳಿಯ ಮುಖಂಡರಾದ ಪ್ರೊ.ಎಂ.ಡಿ.ನಂಜುಂಡಸ್ವಾಮಿ, ಅವರು ಕನ್ನಡ ವರದಿಗಾರರೊಡನೆ ಪ್ರತಿಕ್ರಿಯಿಸುತ್ತ ವಿದ್ಯುತ್ ಶುಲ್ಕ ವಿಧಿಸಲು ಅನುವಾಗುವಂತೆ ರೈತರು ಹೊಂದಿರುವ ಸಾಧನೆಗಳ ಆಧಾರದ ಮೇಲೆ ಶ್ರೀಮಂತ ರೈತರೆಂದು ವಿಂಗಡಿಸುವುದು ಸರಿಯಲ್ಲ. ಬದಲಾಗುತ್ತಿರುವ ಆರ್ಥಿಕ ಹಾಗೂ ಸಾಮಾಜಿಕ ಪರಿಸ್ಥಿತಿಗಳಲ್ಲಿ ದೊಡ್ಡ ಹಿಡುವಳಿದಾರ, ದೊಡ್ಡ ಸಾಲಗಾರನಾದರೆ, ಸಣ್ಣ ಹಿಡುವಳಿದಾರ ಸಣ್ಣ ಸಾಲಗಾರನಾಗಿದ್ದು, ರೈತರಲ್ಲಿ ಶ್ರೀಮಂತರೇ ಇಲ್ಲ ಎಂದು ನುಡಿದರು, ರೈತರು ಬೆಳೆದ ಬೆಳೆಗೆ ವೈಜ್ಞಾನಿಕ ಬೆಲೆ ನಿಗದಿ ಮಾಡಿ ರಕ್ಷಣೆ ನೀಡಿಲ್ಲ. ಅವು ವಿನಾ ಕಾರಣ ಕೃಷಿ ಉತ್ಪನ್ನಗಳ ಬೆಲೆ ಕುಸಿಯುತ್ತಿರುವಾಗ ರೈತರನ್ನು ಶ್ರೀಮಂತರೆಂದು ವರ್ಗೀಕರಿಸುವುದು ಸಾಧ್ಯವಾಗದು. ಈ ಬಗ್ಗೆ ಅಧಿಕಾರಿಗಳು ಕ್ರಮ ಕೈಗೊಳ್ಳದಿದ್ದರೆ ಇಂಥ ನಿರ್ಣಯಗಳ ವಿರುದ್ಧ ರೈತರು ಉಗ್ರ ಹೋರಾಟ ನಡೆಸುವುದು ಅನಿವಾರ್ಯವಾಗುತ್ತದೆ ಎಂದರು.[೨೦]

ವಿದ್ಯುತ್ ಮೀಟರ್ ಕಿತ್ತು ರೈತರು ಪ್ರತಿಭಟನೆ ದಿನಾಂಕ ೩೦.೯.೨೦೦೪ರಂದು ಗುಲ್ಬರ್ಗದಲ್ಲಿ ವಿದ್ಯುತ್ ವ್ಯವಸ್ಥೆ ಖಾಸಗೀಕರಣ ಭಾಗ್ಯಜ್ಯೋತಿ ಸಂಪರ್ಕಕ್ಕೆ ಮೀಟರ್ ಅಳವಡಿಸುವುದನ್ನು ವಿರೋಧಿಸಿ ಕರ್ನಾಟಕ ಪ್ರಾಂತ ರೈತ ಸಂಘದ ಆಶ್ರಯದಲ್ಲಿ ಗುಲ್ಬರ್ಗ ಮತ್ತು ಜೇವರ್ಗಿಯಲ್ಲಿ ರೈತರು ವಿದ್ಯುತ್ ಮೀಟರುಗಳನ್ನು ಕಿತ್ತು ತಂದು ತಹಸೀಲ್ದಾರರ ಕಛೇರಿ ಎದುರು ರಾಶಿ ಹಾಕಿ ಪ್ರತಿಭಟಿಸಿದರು ಹೀಗಾಗಿ ತಹಸೀಲ್ದಾರ ಕಛೇರಿ ಎದುರು ನೂರಾರು ಮೀಟರ್‌ಗಳು ಬಿದ್ದಿದ್ದವು. ಗುಲಬರ್ಗಾದಲ್ಲಿ ನಡೆದ ಪ್ರತಿಭಟನೆ ನೇತೃತ್ವವನ್ನು ಸಂಘದ ತಾಲೂಕು ಸಮಿತಿ ಪ್ರಧಾನ ಕಾರ್ಯದರ್ಶಿ ವಿರೂಪಾಕ್ಷಪ್ಪ ತಡಕಲ್ ವಹಿಸಿದ್ದರು.[೨೧] ಈ ಚಳವಳಿಯಲ್ಲಿ ರೈತರಿಗೆ ದಿನಕ್ಕೆ ೧೨ ತಾಸು ವಿದ್ಯುತ್ ನೀಡಬೇಕು ಎಂದು ಒತ್ತಾಯಿಸಿದರು. ಜೇವರ್ಗಿಯಲ್ಲಿ ದಿನಾಂಕ ೩೦.೯.೨೦೦೪ರಂದು ನಡೆದ ಮೀಟರ್ ಚಳವಳಿಯಲ್ಲಿ

ತಹಸೀಲ್ದಾರರ ಕಛೇರಿ ಮುಂದುಗಡೆ ಸುಮಾರು ೩೦೦ ಮೀಟರ್‌ಗಳು ಹಿಂದುರಿಗಿಸಿ ಪ್ರತಿಭಟನೆ ನಡೆಸಿದರು.[೨೨] ೨.೧೧.೨೦೦೪ರಂದು ಮೀಟರ್‌ಗಳು ಕಿತ್ತು ಹಾಕಿ ಎತ್ತಿನ ಬಂಡಿಗಳೊಂದಿಗೆ ರೈತರಿಂದ ವಿನೂತನ ಪ್ರತಿಭಟನೆ ಮಾಡುವುದರ ಮೂಲಕ ಬೇಡಿಕೆಗಳನ್ನು ಒತ್ತಾಯಿಸಿದರು.[೨೩]

### ೪.೪. ತೊಗರಿ ಬೆಂಬಲ ಬೆಲೆಗಾಗಿ ಚಳವಳಿ

ಗುಲಬರ್ಗಾ ಪ್ರದೇಶವು ತೊಗರಿ ಬೆಳೆಯುವ ಕಣಜ ಎಂದು ಕರೆಯಲಾಗುತ್ತದೆ. ಆದರೆ ಇಲ್ಲಿನ ರೈತರು ನಿರ್ಧಿಷ್ಟವಾದ ಬೆಲೆಯಿಲ್ಲದ ಕಾರಣ ಹಲವಾರು ಸಮಸ್ಯೆಗಳಲ್ಲಿ ಸಿಲುಕಿದ್ದಾರೆ. "ತೊಗರಿ ಕಣಜ"ವೆಂದು ಕರೆಸಿಕೊಂಡರು ಸಹ ಈ ಪ್ರದೇಶದಲ್ಲಿ ತೊಗರಿ ಮಂಡಳಿ ಸ್ಥಾಪನೆ ಮಾಡಿಲ್ಲ. ಆದ್ದರಿಂದ ಇಲ್ಲಿನ ರೈತರು, ರೈತ ಸಂಘಟನೆಗಳು, ರಾಜಕೀಯ ಪಕ್ಷಗಳು, ಮಠಾಧೀಶರು, ವಿದ್ಯಾರ್ಥಿಗಳು ಸೇರಿಕೊಂಡು ಬೆಂಬಲ ಬೆಲೆ ಮತ್ತು ತೊಗರಿ ಮಂಡಳಿ ಸ್ಥಾಪನೆ ಮಾಡುವಂತೆ ಹಲವಾರು ರೀತಿಯ ಪ್ರತಿಭಟನೆ, ಸತ್ಯಾಗ್ರಹ, ಉಪವಾಸಗಳ ಮೂಲಕ ಮನವಿ ಪತ್ರಗಳು ಸರ್ಕಾರಕ್ಕೆ ನಿರಂತರ ನೀಡುತ್ತ ಬಂದಿರುವುದು ಇಲ್ಲಿ ಕಂಡು ಬರುತ್ತದೆ.

೧೯೯೭ರಂದು ಗುಲಬರ್ಗಾ ವಿಭಾಗದಲ್ಲಿ ತೊಗರಿ ಬೆಳೆ ಬೆಲೆ ಇಂದಿನ ಬೆಳೆ ಕ್ವಿಂಟಾಲಿಗೆ ೧೩೫೦ ರೂಪಾಯಿಯಿಂದ ೧೫೫೦ ರೂಪಾಯಿಗಳವರೆಗೆ ಬಂದಿದೆ. ಈ ಭಾಗದಲ್ಲಿ ಸುಮಾರು ೪ ಲಕ್ಷ ಹೆಕ್ಟೇರಿನಲ್ಲಿ ಸುಮಾರು ೫ ಲಕ್ಷ ಟನ್ ತೊಗರಿ ಬೆಳೆಯನ್ನು ಕ್ರಾಪ್ ಆಗಿ ಬೆಳೆಯುತಾರೆ. ಕಳೆದ ೧೯೯೬ರ ಜನವರಿಯಲ್ಲಿ ೧೪೫೦ ರೂಪಾಯಿಯಿಂದ ೨೦೦೦ರೂ ವರೆಗೆ ಇದಿದ್ದು ಇಂದು ಬೆಲೆ ಕುಸದು ಬೀಳುತ್ತಿದೆ. ರೈತರಿಗೆ ತೊಂದರೆ ಆಗುತ್ತಿದೆ. ಸಾಗುವಳಿ ವೆಚ್ಚವು ಎಕರೆಗೆ ಕನಿಷ್ಠ ೧೩೦೦ ರೂಗಳಿಂದ ೧೬೦೦ ರೂಪಾಯಿಗಳವರೆಗೆ ಬರುತ್ತದೆ. ಉತ್ಪನ್ನದ ಆ ವೆಚ್ಚಕ್ಕೆ ಹೋಲಿಸಿದರೆ ಈಗಿನ ದರ ಸ್ವಲ್ಪವೂ ಲಾಭದಾಯಕವಾಗಿಲ್ಲ. ಇಷ್ಟೊಂದು ಪ್ರಮಾಣದಲ್ಲಿ ಬೇಳೆ ಕಾಳುಗಳನ್ನು ಬೇರೆ ಕಡೆ ಬೆಳೆಯುತ್ತಿಲ್ಲ. ಮಾರ್ಕೆಟಿಂಗ್ ಫೆಡರೇಷನ್ ಮೂಲಕ ತೊಗರಿ ಬೇಳೆ ಖರೀದಿ ಆದರೆ. ಇಲ್ಲವೆ ಫುಡ್ ಕಾರ್ಪೊರೇಷನ್ ಆಫ್ ಇಂಡಿಯಾದವರು ಇಲ್ಲಿ ಪ್ರವೇಶಿಸಿದರ ಬೆಲೆಯನ್ನು ಸ್ಥಿರಗೊಳಿಸಲು ಸಾಧ್ಯವಾಗುತ್ತದೆ. ಹತ್ತಿ ಹಾಗೂ ಬೇರೆ ಬೇರೆ ಪದಾರ್ಥಗಳಿಗೆ ಹಾಪ್‌ಕಾಮ್ಸ್ ಮಾಡಿ ರೈತರಿಗೆ ಅನುಕೂಲ ಮಾಡಿದಂತೆ. ತೊಗರಿ ಬೆಳೆ ರೈತರಿಗೂ ಅನುಕೂಲ ಮಾಡಿಕೊಡುವ ಅವಶ್ಯಕತೆ ಇದೆ. ಅದಕ್ಕಾಗಿ ತೊರ್‌ದಾಲ್ ಡೆವಲಪ್ಮೆಂಟ್ ಬೋರ್ಡ್ ಬಗ್ಗೆ ಸರ್ಕಾರ ಯೋಜನೆ ಮಾಡಬೇಕು. ಇದು ಸೂಕ್ತ ಬೆಲೆಯಲ್ಲಿ ಬೆಳೆಯನ್ನು ಮಾರುಕಟ್ಟೆಯಲ್ಲಿ ಬಿಡುಗಡೆ ಮಾಡಲು ಖರೀದಿಸಲು ಅನುಕೂಲವಾಗುತ್ತದೆ. ಮದ್ಯವರ್ತಿಗಳಿಗೆ, ಶ್ರೀಮಂತರಿಗೆ ಲಾಭ ಹೋಗುವುದಕ್ಕಿಂತ ಮೇಲ್ಕಂಡ ಸಂಸ್ಥೆಗಳ ಮೂಲಕ ವ್ಯವಸ್ಥೆ ಮಾಡಿ ರೈತರಿಗೆ ಸಹಾಯ ಒದಗಿಸಬೇಕೆಂದು ಸರ್ಕಾರವನ್ನು ಆಗ್ರಹಿಸುವುದು[೨೪] ರೈತರ ಪ್ರಮುಖ ಬೇಡಿಕೆಯಾಗಿತ್ತು.

ಒಂದು ಎಕರೆ ತೊಗರಿಬೇಳೆ ಉತ್ಪಾದಿಸಲು ಬೀಜ, ಗೊಬ್ಬರ, ಕ್ರಿಮಿನಾಶಕ, ಕಟಾವು ಎಲ್ಲಾ ಸೇರಿ ಎಕರೆಗೆ ೪೫೦೦ ರೂಪಾಯಿಗಳು ಖರ್ಚು ಆಗುತ್ತದೆ. ಅದು ಕ್ವಿಂಟಾಲ್‌ಗೆ ೧೫೦೦ ರೂಪಾಯಿ ಖರ್ಚು ಆದಂತೆ, ಇಂದಿನ ಬೆಲೆ ಕ್ವಿಂಟಾಲ್‌ಗೆ ೧೩೫೦ರಿಂದ ೧೪೨೫ ರೂ.ಗಳ ವರೆಗೆ ಮಾತ್ರ. ಹೀಗಾಗಿ

ರೈತರಿಗೆ ಹಾಕಿದ ಬಂಡವಾಳವೂ ಗಿಟ್ಟದೆ ನಷ್ಟ ಅನುಭವಿಸುವಂತಾಗಿದೆ. ಸರ್ಕಾರ ಅದಕ್ಕಾಗಿ ಮಾರುಕಟ್ಟೆ ಪ್ರವೇಶಿಸಿ ಕೊಂಡುಕೊಳ್ಳಬೇಕು ತನ್ನ ವಿವಿಧ ಏಜೆನ್ಸಿಗಳ ಮೂಲಕ ತೊಗರಿ ಬೆಳೆ ಉತ್ಪಾದನೆಯಲ್ಲಿ ಕನಿಷ್ಠ ಅರ್ಧದಷ್ಟಾದರು ಕೊಂಡರೆ ರೈತ ಬದುಕಲು ಸಾಧ್ಯವಾಗುತ್ತದೆ. ತೊಗರಿ ಬೆಳೆಯ ಬೋರ್ಡ್ ರಚಿಸಿ ತೊಗರಿ ಬೆಳೆಗಾರರಿಗೆ ಕಾಫಿ ಬೋರ್ಡ್ ಇದ್ದಂತೆ, ರಕ್ಷಣೆ ನೀಡಬೇಕು ಎಂದು ಆಗ್ರಹಿಸಿದರು.

ಶ್ರೀ ವೈಜನಾಥ ಪಾಟೀಲ ಅವರು ಗುಲಬರ್ಗಾ ಜಿಲ್ಲೆ ತೊಗರಿ ಬೆಳೆಯುವಲ್ಲಿ ಭಾರತದಲ್ಲಿಯೇ ಎರಡನೆಯ ಸ್ಥಾನದಲ್ಲಿದೆ ಎಂದು ತಿಳಿಸುತ್ತಾ, ಎಕರೆಗೆ ಪೆಸ್ಟಿಸೈಡ್ಸ್, ಕ್ರಿಮಿನಾಶಕ ಹೆಚ್ಚಬೇಕಾದರೆ ಒಮ್ಮೆಗೆ ೫೦೦ ರೂ ಖರ್ಚು ಬರುತ್ತದೆ. ನಾಲ್ಕು ಬಾರಿ ಹೊಡೆಯಬೇಕಾದ್ದರಿಂದ ೨ ಸಾವಿರ ರೂಪಾಯಿ ಖರ್ಚು ಆಗಿ, ಉಳಿದ ಖರ್ಚು ಸೇರಿ ೩ ಸಾವಿರ ರೂಪಾಯಿ ಎಕರೆಗೆ ಖರ್ಚಾಗುತ್ತದೆ. ಹಾರ್ವೆಸ್ಟಿಂಗ್ ಸೀಜನ್ ಇದ್ದಾಗ ಅದರ ಕಿಮ್ಮತ್ತು ವಿಪರೀತ ಕಡಿಮೆ ಇರುತ್ತದೆ. ನಂತರ ಕೆಲವೇ ತಿಂಗಳಲ್ಲಿ ಅದರ ಬೆಲೆ ಸುಮಾರು ನಾಲ್ಕು ಪಟ್ಟು ಆಗುತ್ತದೆ. ತೊಗರಿಯು ಕ್ಯಾಷ್‌ಕ್ರಾಪ್ ಆಗಿರುವಲ್ಲಿ ಈ ಪ್ರದೇಶದ ರೈತರು ಶೋಷಣೆಯನ್ನು ತಪ್ಪಿಸಲು ತೊಗರಿ ಬೆಳೆ ಬೋರ್ಡ್ ಆಗಬೇಕೆಂದು ಅವರ ಬೇಡಿಕೆ ಇದೆ ಎಂದು ರೈತರ ಪರ ಮಾತನಾಡುತ್ತಾರೆ. ಹತ್ತಿ ಬೆಳೆಗಾರರು ಇದೇ ಬಗೆ ಸಮಸ್ಯೆ ಎದುರಿಸುತ್ತಿದ್ದಾರೆಂದು ರಾಯಚೂರಿನ ರೈತನಾಯಕರು ಬಂದು ಹೇಳಿರುವಂತೆ ವ್ಯಾಪಾರಿಗಳು, ಮಧ್ಯವರ್ತಿಗಳಿಂದ ಅವರ ಮೇಲಿನ ಶೋಷಣೆ ಹೆಚ್ಚಿದೆ. ಕಾಟನ್ ಕಾರ್ಪೊರೇಷನ್ ಆಫ್ ಇಂಡಿಯದವರು ಹತ್ತಿ ಖರೀದಿಸಿದರೆ ಶೋಷಣೆ ತಪ್ಪುತ್ತದೆ. ಮಹಾರಾಷ್ಟ್ರದಲ್ಲಿ ಸರ್ಕಾರ ಹತ್ತಿಯನ್ನು ಸಂಪೂರ್ಣವಾಗಿ ಖರೀದಿ ಮಾಡುತ್ತಾರೆ. ನಂತರ ಮಿಲ್ ಮಾಲೀಕರೊಂದಿಗೆ ಹೊಂದಾಣಿಕೆ ಮಾಡಿ ಹೆಚ್ಚಿನ ಬೆಲೆ ಪಡೆದು ರೈತರಿಗೆ ಲಾಭ ಮಾಡುವ ಪ್ರಯತ್ನದಲ್ಲಿದೆ. ಮಧ್ಯವರ್ತಿಗಳ ಕೈವಾಡ ನಿಲ್ಲಿಸಿ ತೊಗರಿ ಮತ್ತು ಹತ್ತಿ ಬೆಳೆಗಳ ಖರೀದಿಯನ್ನು ಸರ್ಕಾರ ಮಾಡಬೇಕೆಂದು ಕೋರಿದರು.[೫೫]

೧೯೯೫-೯೬, ೧೯೯೬-೯೭ನೇ ಸಾಲಿನ ಸಕಾಲಿಕ ಮಳೆಯಿಂದ ತೊಗರಿಬೆಳೆ ಬೆಳೆಯಲು ಉತ್ತೇಜಿತಗೊಂಡರು. ಉತ್ಪಾದನೆ ಗಣನೀಯವಾಗಿ ಹೆಚ್ಚಾಗುವುದರಿಂದ ಮಾರುಕಟ್ಟೆಯಲ್ಲಿ ತೊಗರಿ ಬೆಲೆ ಕುಸಿಯಬಹುದೆಂಬ ಕಳವಳವೂ ರೈತರಿಗಿದೆ. ೧೯೯೬ರ ಜನವರಿಯಲ್ಲಿ ತೊಗರಿಯು. ಮಾದರಿ ಮಾರಾಟ ಬೆಲೆ ಗುಲಬರ್ಗಾ ಮಾರುಕಟ್ಟೆಯಲ್ಲಿ ಕ್ವಿಂಟಾಲಿಗೆ ೧೬೭೫ರೂಪಾಯಿಗಳು ಇದ್ದದ್ದು. ೧೯೯೭ರ ಜನವರಿಯಲ್ಲಿ ೧೫೫೦ ರೂಪಾಯಿಗೆ ಇಳಿದಿತು. ಮುಂಬರುವ ದಿನಗಳಲ್ಲಿ ಬೆಲೆ ಮತ್ತೆ ಕುಸಿದು ರೈತರಿಗೆ ತೊಂದರೆ ಆಗಬಾರದೆಂದು ಕರ್ನಾಟಕ ಕೃಷಿ ಕೈಗಾರಿಕಾ ನಿಗಮ, ಕರ್ನಾಟಕ ಮಾರುಕಟ್ಟೆ ಮಹಾಮಂಡಳಿ, ಕರ್ನಾಟಕ ಆಹಾರ ಮತ್ತು ನಾಗರೀಕ ಸರಬರಾಜು ನಿಗಮ ಮತ್ತು ಕರ್ನಾಟಕ ಎಣ್ಣೆಕಾಳು ಮಂಡಳಿ ಸಂಸ್ಥೆಗಳೊಡನೆ ಸಮಾಲೋಚಿಸಿ. ಇವರು ಸತತವಾಗಿ ಮಾರುಕಟ್ಟೆ ಪ್ರವೇಶಿಸಿ ತೊಗರಿ ಉತ್ಪನ್ನವನ್ನು ಕ್ವಿಂಟಾಲಿಗೆ ೧೫೦೦ ರೂಪಾಯಿಗಳಂತೆ ಖರೀದಿಸಲು ವ್ಯವಸ್ಥೆ ಮಾಡಲಾಗಿದೆ. ಕೇಂದ್ರ ಹಾಗೂ ರಾಜ್ಯದ ಜಂಟಿ ಕಾರ್ಯಕ್ರಮವಾಗಿ ಕನಿಷ್ಠ ಬೆಂಬಲ ಬೆಲೆ ಎಂಬುದು ಏನಿದೆ ಅದು ತೊಗರಿಗೆ ಕೇವಲ

೮೪೦ರೂಪಾಯಿ ಮಾತ್ರ ಇದೆ. ಇಲ್ಲಿ ಆಗುವ ನಷ್ಟವನ್ನು ಸಮಸಮವಾಗಿ ಕೇಂದ್ರ ಹಾಗೂ ರಾಜ್ಯ ಹಂಚಿಕೊಳ್ಳಬೇಕಾಗುತ್ತದೆ.

ರಾಷ್ಟ್ರವ್ಯಾಪಿ ತೊಗರಿ ಬೆಳೆ ಬೆಳೆಯುವ ಕಾರಣ ಇಡೀ ರಾಷ್ಟ್ರಕ್ಕೆ ಅನ್ವಯವಾಗುವಂಥ ಅದರ ಆ ಬೆಂಬಲ ಬೆಲೆಯದಾಗಿದೆ. ತೊಗರಿಯನ್ನು ಮಾರ್ಕೆಟ್ ಇಂಟರ್‌ವೆನ್ಷನ್ ಸ್ಕೀಮ್‌ನಲ್ಲಿ ಖರೀದಿ ಮಾಡುತ್ತದೆ ಎಂದರೆ ಇಲ್ಲಿಯ ರೈತ ಬೆಳೆಗಾರರು ಒಪ್ಪಲು ಸಾಧ್ಯವಿಲ್ಲ. ಅದು ಸಾಧ್ಯವೂ ಅಲ್ಲ ಮಧ್ಯವರ್ತಿಗಳಿಂದ ರೈತರಿಗೆ ರಕ್ಷಣೆ ನೀಡಿ ರೈತರಿಗೆ ನಷ್ಟ ತಪ್ಪಿಸಲು ಸಂಸ್ಥೆಗಳವರೆಗೆ ವ್ಯಾಪಾರ ಮಾಡಲು ಹೇಳಿದ್ದ ಹಾಗೆ ವ್ಯಾಪಾರ ಮಾಡಲು ಹಣದ ಸೌಲಭ್ಯವನ್ನು ಅವರು ಬಯಸಿರುವ ಕಾರಣ ಅದನ್ನು ಸಚಿವ ಸಂಪುಟದ ಸಮ್ಮತಿ ಪಡೆದು ಒದಗಿಸಿ ರೈತರ ರಕ್ಷಣೆ ಮಾಡುವ ಪ್ರಯತ್ನವಾಗಬೇಕು ಎಂದು ರೈತರ ವಾದವಾಗಿತ್ತು.

ಬಂಪರ್ ಪ್ರೈಸ್ ಯಾವಾಗ ಬರುತ್ತದೆ. ಆಗ ಅದನ್ನು ಸಮಸ್ಥಿತಿ ಮಾಡಲು ಸರ್ಕಾರ ಮಧ್ಯ ಪ್ರವೇಶಿಸಬೇಕಾಗುತ್ತದೆ. ದೊಡ್ಡ ಶ್ರೀಮಂತರು ಬೇಳೆ ಖರೀದಿಸಿ ಸಂಗ್ರಹಿಸಿಟ್ಟುಕೊಳ್ಳುವ ಸಾಮರ್ಥ್ಯವಿದ್ದು ಬೆಲೆ ಬಂದಾಗ ಮಾರುತ್ತಾರೆ. ರೈತರಿಗೆ ಇಂಥ ಸಂಗ್ರಹಿಸಿಟ್ಟುಕೊಳ್ಳುವ ಸಾಧನವಿಲ್ಲದ ಕಾರಣ ಯುಗಾದಿ, ಲಗ್ನ, ಮುಹೂರ್ತ ಎಂದು ಬಂದಾಗ ಆ ವೇಳೆಯಲ್ಲಿ ಯಾವ ಬೆಲೆ ಇದೆಯೋ ಅದಕ್ಕೆ ಮಾರಿಬಿಡುತ್ತಾರೆ. ಅಡತಿಗೆ ಹೆಚ್ಚಿಬಿಡುತ್ತಾರೆ. ಗಂಜ್ ಹಾಗೂ ಅಡತಿಯಲ್ಲಿ ಇರುವ ಕಮಿಷನ್ ಏಜಂಟ್‌ಗಳ ಮಾತನ್ನು ನಂಬಿ ಅವರಂದುದಕ್ಕಿಂತ ಹೆಚ್ಚು ಬೆಲೆ ಸಿಗದೆಂದು ೧೦೦ಕ್ಕೆ ೯೦ ಭಾಗ ರೈತರು ಬೆಳೆಯನ್ನು ಅವರ ದರಕ್ಕೆ ಕೊಟ್ಟು ಬಿಡುತ್ತಾರೆ. ರಾಜ್ಯ ಸರ್ಕಾರ ನಿಗದಿಗೊಳಿಸಿರುವ ೧೫೫೦ ರೂಪಾಯಿ ನೀಡಲು ದುಡ್ಡಿಲ್ಲದೆ ಸುಮ್ಮನೆ ಮಾರ್ಕೆಟ್ ಫೆಡರೇಷನ್‌ಲ್ಲಿ ರೇಟ್ ಕೊಡಲಾಗಿದೆ. ಅಷ್ಟೇ ಏಜೆನ್ಸಿಗಳೂ ದರ ಹೆಚ್ಚಿದಾಗ ತಮ್ಮಗೆ ಐವತ್ತು ಪರ್ಸೆಂಟ್ ಬಿಟ್ಟು ಬಿಡಿ ಎನ್ನುತ್ತಾರೆ. ರೇಟ್ ಕಡಿಮೆ ಇದ್ದಾಗ ಬೋರ್ಡ್‌ಗೆ ಮೊರೆ ಹೋಗಿ, ಮಾರ್ಟ್‌ಗೇಜ್ ಮಾಡುತ್ತಾರೆ. ಈ ಬಗ್ಗೆ ಪುನರ್ ಪರಿಶೀಲನೆಯನ್ನು ಸರ್ಕಾರ ಮಾಡಿದರೆ ಒಳ್ಳೆಯದು ತೊಗರಿ ಬೋರ್ಡ್‌ನ ವ್ಯವಸ್ಥೆ ಮಾಡಬೇಕೆಂಬುದು ರೈತರು ಹಾಗೂ ರೈತ ಸಂಘಟನೆಯ ಮುಖ್ಯವಾದ ಬೇಡಿಕೆಯಾಗಿತ್ತು.

೧೪.೧೧.೨೦೦೦ರಂದು ಗುಲಬರ್ಗಾ ಜಿಲ್ಲೆಯ ಮುಖ್ಯಬೆಳೆಯಾದ ತೊಗರಿಯನ್ನು ಬೆಳೆದ ರೈತರ ಶೋಚನೀಯ ಸ್ಥಿತಿಯನ್ನು ಅನುಭವಿಸುತ್ತಾರೆ ಎಂದು ಡಾ.ಎಂ.ಆರ್.ತಂಗಾ ಅವರು ಮುಖ್ಯಮಂತ್ರಿಗಳ ಗಮನಕ್ಕೆ ತಂದರು. ಈಗ ಬಂದಿರುವ ಬಂಪರ್ ಬೆಳೆಯಿಂದಾಗಿ ತೊಗರಿ ಬೆಲೆ ಕುಸಿಯದಂತೆ ಮುನ್ನೆಚ್ಚರಿಕೆ ಕ್ರಮಕೈಗೊಳ್ಳಬೇಕೆಂದರು. ಮಾನ್ಯ ಮುಖ್ಯಮಂತ್ರಿ ಎಸ್.ಎಂ.ಕೃಷ್ಣ ಅವರು ತೊಗರಿ ಹಾಗೂ ತೊಗರಿ ಬೆಳೆ ಆಧಾರಿತ ಕೈಗಾರಿಕೆಗಳಿಗೆ ಸೂಕ್ತ ರಕ್ಷಣೆಯನ್ನು ಸರ್ಕಾರ ನೀಡುವ ಬಗ್ಗೆ ವಿಧಾನ ಸಭೆಯಲ್ಲಿ ಭರವಸೆ ನೀಡಿದರು. ಈ ಮುನ್ನಾ ಡಾ.ಎಂ.ಆರ್.ತಂಗಾ ಅವರು ಗುಲಬರ್ಗಾ ಸಮೃದ್ಧ ತೊಗರಿ ಬೇಳೆ ಎರಡು ಹಂತದಲ್ಲಿ ವಿಧಿಸುವ ತೆರಿಗೆ ಕಾರಣ ಬೆಳೆಯುವ ನೆರೆರಾಜ್ಯದ ಮಾರುಕಟ್ಟೆಗೆ ಹೋಗಿ ಜಿಲ್ಲೆಯ ಉದ್ಯಮದ ಮೇಲೆ ದುಷ್ಪರಿಣಾಮ ಬೀರುತ್ತದೆ. ನೆರೆರಾಜ್ಯದಲ್ಲಿ ತೊಗರಿ ತೆರಿಗೆ

ಶೇ. ೨೫ ರಷ್ಟಿದ್ದು ನಮ್ಮ ರಾಜ್ಯಕ್ಕಿಂತ ಕಡಿಮೆ ಇದೆ ಎಂದಿದ್ದರು. ಹೀಗೆ ಇವರು ತೊಗರಿಯ ಸ್ಥಿತಿಯನ್ನು ಸರ್ಕಾರಕ್ಕೆ ಮನವರಿಕೆ ಮಾಡಿಕೊಟ್ಟರು. ಸ್ಥಿರವಾದ ಬೆಲೆಯನ್ನು ರಚಿಸುವಲ್ಲಿ ಸರಕಾರ ವಿಫಲವಾಗಿದೆ. ಇದರಿಂದ ರೈತರು ಹೋರಾಟಕ್ಕೆ ದಾರಿ ಮಾಡಿಕೊಟ್ಟಂತಾಗಿದೆ.

೨೭.೧೨.೧೯೯೯ ರಂದು ಗುಲ್ಬರ್ಗದಲ್ಲಿ ತೊಗರಿ ಕಣಜದ ರೈತರ ಬೇಡಿಕೆಯಾದ ಪ್ರತ್ಯೇಕ ತೊಗರಿ ಮಂಡಲಿ ರಚನೆಯ ಪ್ರಸ್ತಾಪವನ್ನು ಮಾನ್ಯ ಮುಖ್ಯಮಂತ್ರಿ ಶ್ರೀ ಎಂ.ಎಸ್.ಕೃಷ್ಣ ಅವರು ತಿರಸ್ಕರಿಸಿದುದಕ್ಕೆ ಕರ್ನಾಟಕ ಪ್ರಾಂತ ರೈತ ಸಂಘ ಉಗ್ರವಾಗಿ ಖಂಡಿಸಿತ್ತು. ಪ್ರತಿ ವರ್ಷ ತೊಗರಿ ಹಾಗೂ ಅದರ ಉತ್ಪನ್ನಗಳಿಗೆ ವರ್ಷಕ್ಕೆ ೪೦೦ ಕೋಟಿಯಷ್ಟು ವ್ಯವಹಾರವಿದ್ದು ರಾಜಸ್ಥಾನ, ಗುಜರಾತ್, ಮಹಾರಾಷ್ಟ್ರ ಮುಂತಾದ ರಾಜ್ಯಗಳಿಗೆ ಗುಲ್ಬರ್ಗದ ತೊಗರಿಯೇ ರಫ್ತಾಗುತ್ತದೆ. ಇದನ್ನು ಹಗುರವಾಗಿ ಮುಖ್ಯಮಂತ್ರಿಗಳು ನೋಡಬಾರದು. ಬೆಲೆ ಕುಸಿದ ಬೆಳೆಯನ್ನು ಖರೀದಿಸಲು ೨೦ ಕೋಟಿ ರೂಪಾಯಿ ಆವರ್ತನಿಧಿ ಸ್ಥಾಪನೆ, ತೊಗರಿ ಮಟ್ಟಿಗೆ ಏನೂ ಅಲ್ಲ. ಕನಿಷ್ಠ ೧೦೦ ಕೋಟಿ ಮೀಸಲಿಟ್ಟು ತೊಗರಿ ಖರೀದಿಗೆ ಸರ್ಕಾರ ಮಾರುಕಟ್ಟೆಗೆ ಪ್ರವೇಶಿಸಬೇಕು. ಕ್ವಿಂಟಾಲ್‌ಗೆ ಕನಿಷ್ಟ ೨೦೦೦ ರೂ ಬೆಲೆ ತೊಗರಿಗೆ ಬೇಕು ಎಂದು ಆಗ್ರಹಿಸಿ ದಿನಾಂಕ ೨೭.೧೨.೧೯೯೯ರಂದು ಬೃಹತ್ ಪ್ರತಿಭಟನೆಯನ್ನು, ಕರ್ನಾಟಕ ಪ್ರಾಂತ ರೈತ ಸಂಘಟನೆ, ಹಾಗೂ ಜಿಲ್ಲಾ ರೈತ ಸಂಘಟನೆಗಳು ನಡೆಸಿದವು ರೈತ ಸಂಘದ ರಾಜ್ಯಾಧ್ಯಕ್ಷರಾದ ಶ್ರೀ ಮಾರುತಿ ಮಾನ್ಪಡೆಯವರು ರೈತರ ಉದ್ದೇಶಿಸಿ ಮಾತನಾಡಿ ತೊಗರಿ ಬೆಂಬಲ ಬೆಲೆ ಮತ್ತು ತೊಗರಿ ಮಂಡಳಿ ಸ್ಥಾಪನೆ ಮಾಡುವಂತೆ ಸರ್ಕಾರಕ್ಕೆ ಎಚ್ಚರಿಕೆ ಮಾಡಿದರು.

ಪ್ರಾಂತ ರೈತ ಸಂಘದ ೧೨ನೇ ರಾಜ್ಯ ಸಮಾವೇಶವು ಗುಲಬರ್ಗಾ ೨೦.೯.೨೦೦೦ರಂದು ಮೂರು ದಿನಗಳ ಕಾಲ ಚರ್ಚೆ ನಡೆಸಿ ತೊಗರಿ ರೈತರಿಗೆ ಬವಣೆಗೆ ಕೇಂದ್ರ ಹಾಗೂ ರಾಜ್ಯ ಸರ್ಕಾರದ ಆಮದು ನೀತಿ ಹಾಗೆ ಮಧ್ಯವರ್ತಿಗಳು ಲಾಭ ದೋಚುವಿಕೆಯ ಕಾರಣ ಎಂದು ಹೇಳಿ ತೊಗರಿ ಮಂಡಳಿ ರಚಿಸಿ ತೊಗರಿ ತಳಿಗಳ ಸಂಶೋಧನೆಗೆ ಆದ್ಯತೆ ನೀಡಬೇಕು ಎಂದು ಒತ್ತಾಯಿಸಿತ್ತು.[೨೬]

ತೊಗರಿ ಬೆಳೆಗೆ ಪರಿಹಾರ ಸೇರಿದಂತೆ ಮತ್ತು ಬೆಂಬಲ ಬೆಲೆ ನೀಡುವಂತೆ ಆಗ್ರಹಿಸಿ ದಿನಾಂಕ ೨೯.೧೨.೩೦೦೪ರಂದು ಜಾತ್ಯಾತೀತ ಜನತಾದಳವು ಮಲ್ಲಾಬಾದನಿಂದ ಪಾದಯಾತ್ರೆ ಆರಂಭಿಸಿತು. ೫೦೦ಕ್ಕೂ ಹೆಚ್ಚಿನ ರೈತರು ಭಾಗವಹಿಸಿದ್ದರು. ಬೇಡಿಕೆ ಈಡೇರುವವರೆಗೂ ತಹಶೀಲು ಕಛೇರಿ ಮುತ್ತಿಗೆ ಹಾಕುವುದು ಮತ್ತು ಉಪವಾಸ ಸತ್ಯಾಗ್ರಹ ನಡೆಸುವುದಾಗಿದೆ ಎಂದು ಆಗ್ರಹಿಸಿದರು.[೨೭] ಈ ಚಳವಳಿಯ ವಿವಿಧ ಹಂತದ ಹೋರಾಟ ಮುಂದುವರೆಯಲಿದೆ ಎಂದು ಅವರು ಹೇಳಿದ್ದಾರೆ.

ಗುಲಬರ್ಗಾವು ಮಳೆ ಅಭಾವದಿಂದ ಬೆಳೆನಷ್ಟ ಹೊಂದಿದ ಈ ಪ್ರದೇಶದ ರೈತರಿಗೆ ತೊಗರಿ ಪರಿಹಾರ ಕಲ್ಪಿಸುವಂತೆ ಹಾಗೂ ಬೆಂಬಲ ಬೆಲೆ ನೀಡುವಂತೆ ಆಗ್ರಹಿಸಿ ರೈತ ಸಂಘಟನೆ ಮತ್ತು ರೈತರು ಗುಲಬರ್ಗಾದಲ್ಲಿ ರಸ್ತೆಗೆ ಇಳಿದು ಪ್ರತಿಭಟನೆ ಮಾಡಿ ೩.೧.೨೦೦೪ರಂದು ಜಿಲ್ಲಾಧಿಕಾರಿಗಳಿಗೆ ಮನವಿ ನೀಡಿದರು.[೨೮]

ಗುಲಬರ್ಗಾದ ಜೇವರ್ಗಿ ತಾಲೂಕಿನಲ್ಲಿ ಕಳೆದ ಮೂರು ವರ್ಷಗಳಿಂದ ತೀವ್ರ ಬರ ಎದುರಿಸುತ್ತಿರುವ ರೈತರು, ಕೃಷಿ ಕೂಲಿ, ಕಾರ್ಮಿಕರು, ಕೆಲಸ ದೊರೆಯದೆ ಹೊಟ್ಟೆ ಪಾಡಿಗಾಗಿ ಹೊರ ರಾಜ್ಯಗಳಿಗೆ ವಲಸೆ ಹೋಗಿದ್ದಾರೆ. ಮನೆ ಮುಂದಿನ ಜಾನುವಾರುಗಳನ್ನು ರೈತರು ಅತಿ ಕಡಿಮೆ ಬೆಲೆಗೆ ಮಾರುತ್ತಿದ್ದಾರೆ. ನೀರು, ಮೇವು ದೊರೆಯದೆ ಜಾನುವಾರು ತೀವ್ರ ಸಂಕಷ್ಟಮಯ ಪರಿಸ್ಥಿತಿಯನ್ನು ಎದುರಿಸುತ್ತಿದ್ದಾರೆ. ಇಷ್ಟಾದರೂ ಸರ್ಕಾರ ಯಾವುದೇ ಕಾರ್ಯಕ್ರಮ ರೂಪಿಸಿರುವುದಿಲ್ಲ ಹಾಗೂ ಸಂಪೂರ್ಣ ತೊಗರಿ ಬೆಳೆ ನಾಶವಾಗಿದೆ. ಆದ್ದರಿಂದ ಇದಕ್ಕೆ ಪರಿಹಾರ ಕೊಡಬೇಕು ಮತ್ತು ಮುಂದಿನ ದಿನಗಳಲ್ಲಿ ಬೆಂಬಲ ಬೆಲೆ ನಿರ್ಧರಿಸಬೇಕು ಎಂದು ರೈತ ಮುಖಂಡರಾದ ಕೇದಾರಲಿಂಗಯ್ಯ ಹೀರಮಠ ಅವರ ೩.೧.೨೦೦೪ರಂದು ಸರ್ಕಾರದ ನಿರ್ಲಕ್ಷ್ಯ ಧೋರಣೆಯನ್ನು ಬಲವಾಗಿ ಕಂಡಿಸಿ ತಹಸೀಲ್ದಾರರ ಕಛೇರಿ ಮುತ್ತಿಗೆ ಹಾಕಿ ಪತ್ರವನ್ನು ರಾಜ್ಯ ಸರ್ಕಾರಕ್ಕೆ ಕಳಿಸುವಂತೆ ಬೇಡಿಕೆಗಳನ್ನು ಸಲಿಸಿದರು.[೨೯]

೭.೧.೨೦೦೪ರಂದು ಜೇವರ್ಗಿ ತಹಸೀಲ್ದಾರರ ಕಛೇರಿಗೆ ನುಗ್ಗಿದ ಎತ್ತು ಬಂಡಿ ಪರಿಸ್ಥಿತಿ ಉದ್ರಿಕ್ತ ವಾತಾವರಣ ಉಂಟಾಯಿತು. ಹಾನಿಗೀಡಾದ ತೊಗರಿ ಬೆಳೆಗೆ ಕೂಡಲೇ ಪರಿಹಾರ ಒದಗಿಸಬೇಕು ಎನ್ನುವುದು ಸೇರಿದಂತೆ ವಿವಿಧ ಬೇಡಿಕೆಗಳಿಗೆ ಆಗ್ರಹಿಸಿ ಬುಧುವಾರ ರೈತರು ತಮ್ಮ ಬಂಡಿಗಳ ಮೂಲಕ ಜೇವರ್ಗಿ ತಹಸೀಲ್ದಾರ್ ಕಛೇರಿಗೆ ನುಗ್ಗಿದ್ದರಿಂದ ಉದ್ರಿಕ್ತ ಪರಿಸ್ಥಿತಿ ಉಂಟಾಗಿತ್ತು. ಬೆಳಿಗ್ಗೆಯಿಂದಲೇ ಹಳ್ಳಿಗಳಿಂದ ಒಣಗಿದ ತೊಗರಿ ಬೆಳೆಯೊಡನೆ ತಹಸೀಲ್ದಾರ್ ಕಛೇರಿಗೆ ಆಗಮಿಸಿದ ಕಾರ್ಯಕರ್ತರು ಹಾಗೂ ರೈತರು ನಂತರ ಪಟ್ಟದಲ್ಲಿ ರಸ್ತೆ ತಡೆ ನಡೆಸಿದರು. ಹೀಗಾಗಿ ಸಂಚಾರ ಸಂಪೂರ್ಣ ಅಸ್ತವ್ಯಸ್ಥಗೊಂಡಿತ್ತು. ನಂತರ ತಹಸೀಲ್ದಾರ್ ಕಛೇರಿಗೆ ಬಂಡಿ ಸಮೇತ ರೈತರು ಆಗಮಿಸಿದಾಗ ಪರಿಸ್ಥಿತಿ ಉದ್ರಿಕ್ತವಾಯಿತು. ಎತ್ತುಗಳನ್ನು ಕಛೇರಿಯೊಳಗೆ ನುಗ್ಗಿಸಲು ಕೆಲವರು ಪ್ರಯತ್ನಿಸಿದಾಗ ಅದನ್ನು ತಡೆಯಲು ಪೊಲೀಸರು ತೀವ್ರ ಪ್ರಯಾಸ ಪಡಬೇಕಾಯಿತು. ನಂತರ ರೈತರು ತಮ್ಮ ಎತ್ತುಗಳ ಜೊತೆಗೆ ವೇದಿಕೆಯ ಹತ್ತಿರ ಬಂದು ಅಲ್ಲಿ ಕುಳಿತು ಪ್ರತಿಭಟನೆ ಮುಂದುವರೆಸಿದರು.[೩೦]

### ೪.೫. ಕಬ್ಬು ಬೆಳೆಗಾರರ ಚಳವಳಿ

ಕಬ್ಬು ಬೆಳೆಗಾರರು ಮತ್ತು ಕೃಷಿ ಸಚಿವರು ರೈತವರ್ಗದ ಸಮಸ್ಯೆಗಳ ಇತ್ಯರ್ಥಗಳ ಬಗ್ಗೆ ವಿಚಾರ ಮಾಡುತ್ತಿಲ್ಲ. ಮುಖ್ಯಮಂತ್ರಿಗಳಿಗೆ ಸರಿಯಾದ ಮಾಹಿತಿ ತಿಳಿಸದ ೧೧.೮.೧೯೮೩ರಂದು ಬಂದಿರುವ ೬೦-೬೫ ಜನ ರೈತರನ್ನು ಶಾಸಕ ನಾಗೇಗೌಡರನ್ನು ಆಳುವ ಪಕ್ಷದ ಶ್ರೀ ಬಂಡೀಸಿದ್ದೇಗೌಡರನ್ನು ವಿಧಾನಸೌಧದಿಂದ ಹೊರಗೆ ಕಳುಹಿಸುವ ಕೆಲಸ ನಡೆದಿದೆ. ರೈತ ಮುಂದಾಳುಗಳ ಮನವೊಲಿಸಿ ಸಮಾಲೋಚನೆಯನ್ನು ಮುಖ್ಯ ಮಂತ್ರಿಗಳು ನಮ್ಮೊಡನೆ ಸರಿಯಾದ ರೀತಿ ವ್ಯವಹಾರ ಮಾಡಲಿಲ್ಲ ಎಂದ ರೈತ ಮುಂದಾಳುಗಳು ಹೇಳಿದರು. ೩ರಿಂದ ೯ನೇ ತಾರೀಖಿನವರೆಗೆ ಯಾವ ಕಾನೂನು ಭಂಗ ಮಾಡದೆ ರೈತರು ೯ನೇ ತಾರೀಖು ಮಾಡಿದರು. ಆಗಸ್ಟ್ ೯ರಂದು ರೈತರು ಧರಣಿ ಕುಳಿತ ಬಗ್ಗೆ ಗಮನ ಸೆಳೆದರು. ಹಳ್ಳಿಯ ರೈತ ಪಟ್ಟಣಕ್ಕೆ ಬಂದು ಉಪವಾಸ ಸತ್ಯಾಗ್ರಹ ಮಾಡುತ್ತಿದ್ದಾರೆ ಎಂದರೆ ಅವನ

ಪರಿಸ್ಥಿತಿಯನ್ನು ಅರ್ಥ ಮಾಡಿಕೊಳ್ಳಬೇಕು ಕಬ್ಬು ಬೆಳೆಗಾರರಿಗೆ ಸರಿಯಾದ ಬೆಲೆ ಸಿಗುತ್ತಿಲ್ಲ. ಅವರು ತಮ್ಮ ಬೇಡಿಕೆಗಳನ್ನಿಟ್ಟು ಸತ್ಯಾಗ್ರಹ ಮಾಡಿದರು.[೨೦]

ಆದರೆ ರೈತ ಪ್ರತಿನಿಧಿಗಳು ಅನುಭವಿಸಿದ ತೊಂದರೆಯನ್ನು ಪತ್ರಿಕೆಗಳ ಮೂಲಕ ಜನರು ತಿಳಿದು ಕೊಂಡಿದ್ದಾರೆ. ರೈತರ ಮೂರು ಬೇಡಿಕೆಗಳೆಂದರೆ (೧) ಟನ್ ಕಬ್ಬಿಗೆ ೧೮೦ರ ಬದಲು ಟನ್‌ಗೆ ೨೦೧ ರೂಪಾಯಿ ೬೮ ಪೈಸೆ ಕೊಡಬೇಕು, ಅಂದರೆ ೨೧ ರೂಪಾಯಿ ೬೧ ಪೈಸೆ ಹೆಚ್ಚುವರಿ ಕೊಡಲು ರೈತ ಸಂಘದವರು ಹೇಳಿದ್ದಾರೆ. (೨) ಪರ್‌ಚೇಸ್ಡ್ ಟ್ಯಾಕ್ಸ್ ಅನ್ನು ರೈತರಿಗೆ ವಾಪಸ್ ಮಾಡಬೇಕು. ೩ ಮಹಾರಾಷ್ಟ್ರ, ತಮಿಳುನಾಡು ಮಾದರಿಯಲ್ಲಿ ಟನ್ನಿಗೆ ೧೦ರೂ ಸಬ್ಸಿಡಿ ಕೊಡಬೇಕು ೪ ಸುಮಾರು ೨೨.೨೩ ಕಾರ್ಖಾನೆಗಳಿಂದ ರೈತರಿಗೆ, ೨೧-೨೨ ರೂಪಾಯಿಗಳ ಬಾಕಿಯನ್ನು ಕೊಡುತ್ತೇವೆಂದು ಹೇಳಿದರೆ ವಿನಃ ನಿರ್ದಿಷ್ಟ ಕಾಲದೊಳಗೆ ಸರ್ಕಾರ ಕೊಡಲು ತೀರ್ಮಾನ ತೆಗೆದುಕೊಂಡಿಲ್ಲ. ಇನ್ನು ರೈತ ಸಂಘಗಳು ಎಷ್ಟೇ ಇರಲಿ ಅವರೆಲ್ಲರನ್ನು ಸರ್ಕಾರ ಕೇಳಬೇಕು ಎಂದು ಪ್ರತಿಭಟಿಸಿದರು.

**ಹೊರರಾಜ್ಯ ಕಬ್ಬು ಸಾಗಾಣಿಕೆ ನಿಷೇಧ, ರೈತರ ತೊಂದರೆಗಳು ಮತ್ತು ಹೋರಾಟ ೧೯೯೬**

೧೯೯೬ರಲ್ಲಿ ರೈತ ಬೆಳೆದ ಕಬ್ಬನ್ನು ಅರೆಯುವ ಸೂಕ್ತವ್ಯವಸ್ಥೆ ಇಲ್ಲದೆ ರೈತ ಬೀದಿ ಪಾಲಾಗಿದ್ದನು. ಬೆಳೆದ ಕಬ್ಬನ್ನು ಬೆಂಕಿ ಹಾಕಿ ಸುಟ್ಟು ಬಿಡುವ ದಾರುಣ ದೃಶ್ಯ ಕಾಣುತ್ತಿದೆ. ರೈತ ಈ ವರ್ಷ ೧೦ ಲಕ್ಷ ಟನ್ ಕಬ್ಬು ಬೆಳೆದಿದ್ದಾರೆ. ರೈತ ಸಿಕ್ಕಾಪಟ್ಟೆ ಕಬ್ಬು ಬೆಳೆದ ಪರಿಣಾಮ ಕಬ್ಬು ಅರೆಯುವ ವ್ಯವಸ್ಥೆ ಇಲ್ಲ ಎನ್ನುವುದು ಸರಿಯಲ್ಲ. ಮಹಾರಾಷ್ಟ್ರ, ತಮಿಳು ನಾಡಿಗೆ ಹಿಂದೆ ನಮ್ಮ ರೈತ ಕಬ್ಬು ಕೊಡುತ್ತಿದೆ. ಈಗ ಸ್ವಾವಲಂಬನೆ ದೃಷ್ಟಿಯಿಂದ ನಮ್ಮ ಕಬ್ಬು ಅರೆಯಲು ಅಗತ್ಯವಿರುವ ಕಾರ್ಖಾನೆಗಳನ್ನು ಆರಂಭಿಸಿದ ಹೊರತು. ಕಾರ್ಖಾನೆಯು ನಿರಂತರವಾಗಿ ಶಕ್ತಿ ಇರುವಷ್ಟು ಕಬ್ಬು ಅರೆಯುವ ವ್ಯವಸ್ಥೆ ಮಾಡದಿರುವ ಕಾರಣ ಹಾಗೂ ನಿರ್ಲಕ್ಷ್ಯದಿಂದಾಗಿ ಅದರ ದುಷ್ಪರಿಣಾಮ ಇದು ಕಾಣಬರುತ್ತಿದೆ. ಅಳಂದ ತಾಲ್ಲೂಕಿನ ರೈತರಿಗೆ ೭ ಕೋಟಿ ರೂಪಾಯಿ, ಬೀದರ್ ರೈತರಿಗೆ ೧೪ ಕೋಟಿ ರೂಪಾಯಿ ಅಲ್ಲಿನ ಸಕ್ಕರೆ ಕಾರ್ಖಾನೆ ಕೊಡಬೇಕಿದೆ ಎಂದರು.

ಸಕ್ಕರೆಗೆ ೨-೩ ವರ್ಷಗಳ ಹಿಂದೆ ಕಬ್ಬು ಕಡಿಮೆಯಾಗಿ ಬೆಲ್ಲದ ಧಾರಣೆ ಏರಿತ್ತು. ಬೆಲ್ಲದ ತಯಾರಿಕೆಗೆ ಮತ್ತು ಬಂಡಸಾರಿ ಕಾರ್ಖಾನೆಗೆ ೪೦ ಪರ್ಸೆಂಟ್ ಕಬ್ಬು ಬೇಕಾಗುತ್ತದೆ. ಉಳಿದ ೬೦ ಪರ್ಸೆಂಟ್ ಸಕ್ಕರೆ ಕಾರ್ಖಾನೆಗೆ ಬೇಕೆನ್ನುವಾಗ ಮೊದಲೇ ರೈತರಿಗೆ ತಮ್ಮ ಅಗತ್ಯಗಳನ್ನು ತಿಳಿಸಬೇಕಿತ್ತು. ರಾಜ್ಯದ ಜಿಲ್ಲೆಗಳಾದ ಬೆಳಗಾಂ, ಬೀದರ್, ಬಿಜಾಪುರ, ಧಾರವಾಡ, ಗುಲ್ಬರ್ಗಾ, ಮಂಡ್ಯ, ಹಾಸನಗಳಿಂದ ಮಹಾರಾಷ್ಟ್ರಕ್ಕೆ ಹೋಗುತ್ತಿದ್ದ ಕಬ್ಬು ಇಂದು ಹೋಗುತ್ತಿಲ್ಲ. ಮಹಾರಾಷ್ಟ್ರದವರು ರೈತರಿಗೆ ಹಿಂದೆ ಹೆಚ್ಚಿನ ಧಾರಣೆ ಕೊಡುತ್ತಿದ್ದು, ಈಗೆರಡು ವರ್ಷಗಳಿಂದ ಸಕ್ಕರೆ ಬೆಲೆ ಇಳಿದು ಆರ್ಥಿಕ ಮುಗ್ಗಟ್ಟು ಒದಗಿ ಅವರು ಈಗ ತೆಗೆದುಕೊಳ್ಳುತ್ತಿಲ್ಲ. ರೈತರೂ ಇದರಿಂದ ಆರ್ಥಿಕ ಮುಗ್ಗಟ್ಟಿಗೆ ಸಿಲುಕಿದ್ದಾರೆ.

ಶ್ರೀ ಕೆ.ಎಸ್.ಪುಟ್ಟಣ್ಣ ನವರು ೨೫.೦೨.೧೯೯೭ರಂದು ಸಕ್ಕರೆ ಕಾರ್ಖಾನೆ ಕುರಿತು ಮಾತನಾಡುತ್ತ ಆ ಕಾರ್ಖಾನೆಗಳಿಂದ ರೈತರಿಗೆ ಒಟ್ಟು ಕೊಡಬೇಕಾದ ೧೧ ಕೋಟಿ ೨೮ ಲಕ್ಷ ರೂಪಾಯಿಗಳಲ್ಲಿ ೩ ಕೋಟಿ ೪೦ ಲಕ್ಷ ಬಾಕಿ ಆಗಿದೆ. ೬೨೦ ರೈತರಿಗೆ ಕೊಟ್ಟ ಚೆಕ್ಕ್ ಬೌನ್ಸ್ ಆಗಿದೆ. ರೈತರು ೧೪ನೇ ತಾರೀಖಿನಿಂದ ಬಾಕಿಗೋಸ್ಕರ ಚಳವಳಿ ಮಾಡಿ ಚಿಮಣಿ ಮೇಲೆ ಹತ್ತಿದರು. ಅವರ ಜೊತೆಯಲ್ಲಿ ಜಿಲ್ಲಾಧಿಕಾರಿ ಹಾಗೂ ಸೂಪರಿಟೆಂಡೆಂಟ್ ಆಫ್ ಪೊಲೀಸ್ ಬಂದ ಒಂದು ವಾರದೊಳಗೆ ಬಾಕಿಯನ್ನು ಕೊಡಿಸುತ್ತೇವೆ ಎಂದು ಹೇಳಿ ಸಮಾಧಾನ ಮಾಡಿದ್ದಾರೆ. ಸರ್ಕಾರ ಕಬ್ಬು ಬೆಳೆಗಾರರ ಬಗ್ಗೆ ಗಂಭೀರ ಚಿಂತನೆ ಮಾಡಬೇಕು. ಈಗ ಬೇರೆ ಬೆಲೆ ೯ ರೂ ನಿಂದ ೧೦.೫೦ಪೈಸೆ ಆಗಿದೆ. ಅದು ಏರಿದೆ ಆದ್ದರಿಂದ ಎಲ್ಲಾ ಕಾರ್ಖಾನೆಗಳ ಮೀಟಿಂಗ್ ಕರೆದು ವಾರದೊಳಗೆ ಬೆಲೆ ನಿಗದಿ ಮಾಡಿ ರೈತರಿಗೆ ಬಾಕಿ ಕೊಡಿಸಬೇಕು. ಕಬ್ಬು ಬೆಳೆಗಾರರು ತೀರ ದುಸ್ಥಿತಿಯಲ್ಲಿದ್ದಾರೆ, ಕಬ್ಬಿಗೆ ವೈಜ್ಞಾನಿಕ ಬೆಲೆಯನ್ನು ಕೊಡುವ ವ್ಯವಸ್ಥೆ ಮಾಡಬೇಕು. ಕಾರ್ಖಾನೆಗಳ ದುಸ್ಥಿತಿಯನ್ನು ಚರ್ಚೆ ಮಾಡಿ ರೈತರ ಸಮಸ್ಯೆಯನ್ನು ಬಗೆಹರಿಸಬೇಕೆಂದು ಒತ್ತಾಯಿಸಿದರು.[೩೨]

ಕಬ್ಬು ಬೆಳೆಗಾರರಿಗೆ ಟ್ರಾನ್ಸ್ ಪೋರ್ಟೇಷನ್ ಸಬ್ಸಿಡಿ ಸುಮಾರು ನಾಲ್ಕುವರೆ ಕೋಟಿ ರೂಪಾಯಿಗಳು ಬರಬೇಕು. ೬೦೦ ರೂಪಾಯಿ ಬೆಂಬಲ ಬೆಲೆ ಘೋಷಣೆ ಮಾಡಿದಾಗ ಕಬ್ಬು ಬೆಳೆಗಾರರ ಹಿತದೃಷ್ಟಿಯನ್ನು ಆಲೋಚಿಸಬೇಕಿತ್ತು. ಈಗ ಕೆ.ಜಿ.ಸಕ್ಕರೆ ಬೆಲೆ ಹೆಚ್ಚಿದೆ ಎರಡು ಸಾರಿ ಲೆವಿ ಸಕ್ಕರೆ ಬೆಲೆ ಜಾಸ್ತಿಯಾಯಿತ್ತು. ಅಂತಾಗಿ ಕಾರ್ಖಾನೆಗಳವರನ್ನು ಕರೆದು ಬೆಲೆ ನಿಗದಿ ಮಾಡಿ ಬಾಕಿಯನ್ನು ಕೊಡಿಸಿ ಎಂದು ಧರಣೆ ಮಾಡಿದರು.

ಗುಲಬರ್ಗಾ ಜಿಲ್ಲೆಯ ಆಳಂದ ಶುಗರ್ ಕೋ ಆಪರೇಟಿವ್ ಫ್ಯಾಕ್ಟರಿ ಕೂಡ ಬಾಕಿ ಹಣ ಕೊಡುವ ವಿಚಾರ ಪೆಂಡಿಂಗ್ ಇದೆ. ಅಲ್ಲಿಯೂ ಸಿ.ಒ.ಡಿ ವಿಚಾರಣೆ ಆಗಿ ವರದಿಯು ಯಾವ ಕ್ರಮ ಕೂಡ ಜರುಗಿಸಿಲ್ಲ ಎಂದು ಆಳಂದ ಸಕ್ಕರೆ ಕಾರ್ಖಾನೆ ಕೂಡ ಬಾಕಿ ೨೧ ಕೋಟಿ ರೂಪಾಯಿಗಳಿತ್ತು. ಅದಕ್ಕೆ ೬ ಕೋಟಿ ರೂಪಾಯಿಗಳನ್ನು ಒದಗಿಸಿ ರೈತರಿಗೆ ಆ ಹಣ ಕೊಡುವ ವ್ಯವಸ್ಥೆ ಮಾಡಿದೆ. ಇನ್ನೂ ೧೫ ಕೋಟಿ ರೂಪಾಯಿಗಳು ಅದರಿಂದ ಬಾಕಿ ಉಳಿದಿದೆ. ಹೈಪವರ್ ಕಮಿಟಿಯವರು ಸಕ್ಕರೆ ಬೆಲೆಯನ್ನು ನಿಗದಿ ಮಾಡಿದ ಪ್ರಕಾರ ರಿಕವರಿ ಎಷ್ಟು ಎನ್ನುವ ಬಿಲ್ ಕೊಟ್ಟಿದ್ದರೆ ಬಾಕಿ ಉಳಿಯುವ ಪ್ರಶ್ನೆ ಬರುತ್ತಿರಲಿಲ್ಲ. ಈ ಬಾಕಿ ಹಣ ಶುಗರ್ ಫ್ಯಾಕ್ಟರಿಗೆ ಆದ ಹಾನಿಯಿಂದಲ್ಲ, ಅಥವಾ ಅನ್ಯಕಾರಣದಿಂದ ಆಗಿಲ್ಲ. ೧೯೯೫-೯೬ ಮತ್ತು ೧೯೯೬-೯೭ರಲ್ಲಿ ಕಾರ್ಖಾನೆಯವರು ಮಾಡಿಕೊಂಡ ಲಾಭದಲ್ಲಿ ಸಹ ರೈತರಿಗೆ ದುಡ್ಡು ಕೊಡಿಸಬೇಕು ಇನ್ನು ಸಿ.ಒ.ಡಿ ತನಿಖೆ ಆಗಬೇಕಾದುದು. ಸರಿ ತಪ್ಪಿತಸ್ಥರ ಮೇಲೆ ಕ್ರಮ ಕೈಗೊಳ್ಳುತೇವೆ. ರಾಜ್ಯದಲ್ಲಿರುವ ಎಲ್ಲಾ ಸಕ್ಕರೆ ಕಾರ್ಖಾನೆಗಳಲ್ಲಿ ಹಣ ಬಾಕಿ ಉಳಿದು ಕೊಂಡಿದೆ. ರೈತ ತೊಂದರೆ ಆಗಿರುವ ಬಗ್ಗೆ ಗಮನಿಸಿ ಅವರಿಗೆ ಹಣ ಕೊಡಿಸುವ ವ್ಯವಸ್ಥೆ ಮಾಡಬೇಕು. ಬೆಲೆ ನಿಗದಿ ಮಾಡಲು ಹೈಪವರ್ ಕರೆಯಲಾಗುತ್ತದೆ ಎಂದರು. ಈ ಸಂದರ್ಭದಲ್ಲಿ ಸಹಕಾರಿ ಕ್ಷೇತ್ರದಲ್ಲಿ ೬೦೦ ರೂಪಾಯಿ ೭೩೦-೭೪೦ ರೂಪಾಯಿಗಳವರೆಗೆ ಕೊಡುತ್ತಿದ್ದಾರೆ. ಸರ್ಕಾರ ನಮಗೆ ಆ ಬಗ್ಗೆ ಏನು

ಆದೇಶ ಕೊಡದೆ ಇರುವುದರಿಂದ ೬೦೦ ರೂಪಾಯಿಗೆ ಮಾತ್ರ ಕೊಡುತ್ತಿದ್ದೇವೆ ಎಂದು ಖಾಸಗಿ ಕಾರ್ಖಾನೆಯವರು ಹೇಳುತ್ತಾರೆ.

### ಕಬ್ಬು ಸಾಗಾಣಿಕೆಗೆ ನಿಷೇಧ, ಪ್ರತಿರೋಧ

ರಾಜ್ಯದ ಗಡಿ ಪ್ರದೇಶವಾದ ಬೆಳಗಾವಿ, ಬಿಜಾಪುರ, ಗುಲಬರ್ಗಾ, ಮತ್ತಿತರ ಅನೇಕ ಜಿಲ್ಲೆಗಳಲ್ಲಿ ಮಳೆ ವಿಫಲವಾಗಿದೆ. ಆದರಿಂದ ಈ ಬಾರಿ ಶೇ. ೧೪-೧೫ರಷ್ಟು ಕಬ್ಬಿನ ಬೆಳೆ ಕೈಕೊಟ್ಟಿದೆ. ರಾಜ್ಯದ ಸಕ್ಕರೆ ಕಾರ್ಖಾನೆಗಳು ಕಬ್ಬು ಇಲ್ಲದೆ ಸೊರಗಬಾರದು ಎಂದು ಹಾಗೂ ರಾಜ್ಯಕ್ಕೆ ಬರುವ ವಹಿವಾಟು ತೆರಿಗೆ ತಪ್ಪಬಾರದು ಎಂದು ಇಂಡಿ ತಾಲ್ಲೂಕು ಹೊರತಾಗಿ ರಾಜ್ಯದ ಕಬ್ಬು ನೆರೆಯ ರಾಜ್ಯಗಳಿಗೆ ಸಾಗಾಣಿಕೆ ಸರ್ಕಾರ ನಿಷೇಧವನ್ನು ಹಾಕಿತು. ಇಂಡಿ ತಾಲ್ಲೂಕಿನ ಕಬ್ಬು ಬೆಳೆಗಾರರಿಗೆ ಮಹಾರಾಷ್ಟ್ರಕ್ಕೆ ಕಬ್ಬು ಸಾಗಿಸಲು ಸಾಗಾಣಿಕೆ ವೆಚ್ಚ ಕಡಿಮೆ ಆಗುವ ಕಾರಣ ಅವರಿಗೆ ವಿನಾಯಿತಿ ನೀಡಿತು.

ಮಹಾರಾಷ್ಟ್ರದಲ್ಲಿ ಟನ್ ಕಬ್ಬಿಗೆ ೮೦೦ರೂ ಸಿಕ್ಕಿದರೆ ರಾಜ್ಯದ ಸಕ್ಕರೆ ಕಾರ್ಖಾನೆಗಳಲ್ಲಿ ಟನ್ನಿಗೆ ಕೇವಲ ೪೦೦ ರೂ. ಪಡೆಯುವ ಸ್ಥಿತಿ ರೈತರಿಗಾಗಿದೆ. ವಿದ್ಯುತ್ ಸಮಸ್ಯೆಯಿಂದಲೂ ಕಬ್ಬು ಬೆಳೆಗಾರರಿಗೆ ತೊಂದರೆ ಆಗಿದೆ. ಇದರ ಸಲುವಾಗಿ ಕಬ್ಬು ಬೆಳೆಗಾರರು ಉಗ್ರವಾದ ಪ್ರತಿಭಟನೆ ಹೋರಾಟ ನಡೆಸಿದರು. ಹಾಗೆ ಅಳಂದ ಸಕ್ಕರೆ ಕಾರ್ಖಾನೆ ೧೯೯೪-೧೯೯೫ರ ಅವಧಿಯಲ್ಲಿ ಸುಮಾರು ೨-೩ಕೋಟಿ ರೂಪಾಯಿ ಮೌಲ್ಯದ ಕಬ್ಬನ್ನು ಸರಬರಾಜು ಪಡೆದು ರೈತರಿಗೆ ಹಣನೀಡಿಲ್ಲ.

೨೦೦೦-೦೧ನೇ ಸಾಲಿನಲ್ಲಿ ಟನ್ ಕಬ್ಬಿಗೆ ಸರಾಸರಿ ದರ ೪೦೦ರೂ ನೀಡಿದ್ದು, ರಾಜ್ಯದ ಇತರ ಕಾರ್ಖಾನೆಗಳು ನೀಡುತ್ತಿರುವ ದರಕ್ಕಿಂತಲೂ ಅದು ಕಡಿಮೆ ಇದೆ. ಮೂರು ವರ್ಷಗಳ ಹಿಂದೆ ರಾಜ್ಯದಲ್ಲಿ ಸುಮಾರು ೨೫ಲಕ್ಷ ಟನ್ ಅಧಿಕ ಕಬ್ಬಿನ ಬೆಳೆ ಬಂದಾಗ ರೈತರಿಗೆ ರಕ್ಷಣೆ ದೊರಕಲಿಲ್ಲ. ಆಗ ಟನ್‌ಗಟ್ಟಲೆ ಕಬ್ಬನ್ನು ರೈತರೇ ಸುಟ್ಟಿದ್ದರು. ಆಳಂದ ಸಕ್ಕರೆ ಕಾರ್ಖಾನೆಯ ವ್ಯಾಪ್ತಿಗೆ ಬರುವ ಗುಲಬರ್ಗಾ ಜಿಲ್ಲೆಯ ಅಳಂದ, ಅಫಜಲಪುರ ಹಾಗೂ ಗುಲಬರ್ಗಾ ತಾಲ್ಲೂಕಿನ ರೈತರು ಮಹಾರಾಷ್ಟ್ರಕ್ಕೆ ಕಬ್ಬು ಸಾಗಾಣಿಕೆಯ ಮೇಲೆ ಸರ್ಕಾರ ನಿಷೇಧ ಹೇರಿರುವುದು ವಿರೋಧಿಸಿ ಆದೇಶವನ್ನು ವಾಪಸ್ ಪಡೆಯಲು ಪತ್ರದ ಮೂಲಕ ಮುಖ್ಯಮಂತ್ರಿಗಳನ್ನು ಮನವಿ ಮಾಡಿಕೊಳ್ಳುವುದರೊಂದಿಗೆ ೨೮-೧೧-೨೦೦೧ರಂದು ಬೃಹತ್ ಪ್ರತಿಭಟನೆ, ಸತ್ಯಾಗ್ರಹ ಮಾಡಿದರು.[೩೩]

ರಾಜ್ಯ ರೈತರ ಸಂಘವು ಅಂತರರಾಜ್ಯ ಕಬ್ಬು ಸಾಗಾಣಿಕೆಯನ್ನು ನಿಷೇಧಿಸಿ ರಾಜ್ಯ ಸರ್ಕಾರ ಹೊರಡಿಸಿರುವ ಆದೇಶವನ್ನು ಪ್ರತಿಭಟನೆ ಗುಲಬರ್ಗಾದಿಂದ ಮಹಾರಾಷ್ಟ್ರಕ್ಕೆ ಕಬ್ಬು ಸಾಗಿಸುವ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಿದೆ. ರಾಜ್ಯದ ಕಬ್ಬು ಬೆಳೆಗಾರರಿಗೆ ಬರಬೇಕಾಗಿದ್ದ ಬಾಕಿ ಬಂದಿಲ್ಲ. ಅವರಿಗೆ ಸಾಲವನ್ನು ತೀರಿಸಲಾಗಿಲ್ಲ. ಈ ಸ್ಥಿತಿಯಲ್ಲಿ ಹಣ ಬಾಕಿಯಾಗಿರುವ ಸಕ್ಕರೆ ಕಾರ್ಖಾನೆಗಳಿಗೆ ಕಬ್ಬು ನೀಡಲು ಕಷ್ಟವಾಗಿದೆ.ಸಕ್ಕರೆ ಕಾರ್ಖಾನೆಗಳ ಮಾಲೀಕರ ಒತ್ತಡಕ್ಕೆ ಮಣಿದು ಅಂತರರಾಜ್ಯ ಕಬ್ಬು ಸಾಗಾಣಿಕೆಯನ್ನು ನಿಷೇಧ ಮಾಡಿರುವುದು ರೈತರ ಹಿತಾಸಕ್ತಿಗೆ ಧಕ್ಕೆಯಾಗಿದೆ. ಅಂತಾಗಿ ಮಹಾರಾಷ್ಟ್ರಕ್ಕೆ ಕಬ್ಬು ಕಳುಹಿಸುವುದಾಗಿ ೧೨.೧೨.೨೦೦೧ರಂದು ಚಳವಳಿಯನ್ನು ರೈತ ಸಂಘಟನೆ ಹಮ್ಮಿಕೊಂಡಿತು.[೩೪]

## ಸುರಿಸದಿರುವ ಕಬ್ಬಿಗೆ ೧೩ ಕೋಟಿ ಪರಿಹಾರ ಬಿಡುಗಡೆ

೨೦೦೭ರಲ್ಲಿ ಜಿಲ್ಲೆಯಲ್ಲಿ ಸಕ್ಕರೆ ಕಾರ್ಖಾನೆಗಳಿಂದ ನುರಿಸದೆ ಉಳಿದಿರುವ ಕಬ್ಬಿನ ಪರಿಹಾರವನ್ನು ಕಬ್ಬು ಬೆಳೆಗಾರರಿಗೆ ವಿತರಿಸಲು ಸರ್ಕಾರ ೧೩ ಕೋಟಿ ರೂಪಾಯಿ ಬಿಡುಗಡೆ ಮಾಡಿದೆ ಎಂದು ಜಿಲ್ಲಾಧಿಕಾರಿ ಪಂಕಜಕುಮಾರ ಪಾಂಡೆ ಅವರು ೬.೧೦.೨೦೦೭ರಂದು ಹೇಳಿದರು.[೫೯] ಇಲ್ಲಿನ ಜಿಲ್ಲಾ ಪಂಚಾಯತಿ ಸಭಾಂಗಣದಲ್ಲಿ ನಡೆದ ಜಿಲ್ಲಾ ಮಟ್ಟದ ಜನಸ್ಪಂದನ ಸಮಿತಿ ಸಭೆ ಅಧ್ಯಕ್ಷತೆ ವಹಿಸಿ ಮಾತನಾಡಿದರು. ಈ ಹಣವನ್ನು ಅರ್ಹ ರೈತರಿಗೆ ವಿತರಿಸಲು ಜಿಲ್ಲೆಯ ಎಲ್ಲಾ ತಹಸೀಲ್ದಾರರಿಗೆ ಬಿಡುಗಡೆ ಮಾಡಲಾಗುವುದು ಎಂದು ಅವರು ತಿಳಿಸಿದರು.

ಆಯಾ ತಹಸೀಲ್ದಾರರು ಗ್ರಾಮ ಸಭೆಗಳನ್ನು ಆಯೋಜಿಸಿ ಅರ್ಹರಾದವರಿಗೆ ಚೆಕ್‌ಗಳ ಮೂಲಕ ಪರಿಹಾರ ಹಣ ವಿತರಿಸುವ ವ್ಯವಸ್ಥೆ ಮಾಡಬೇಕು. ಈ ಸಭೆಗಳಿಗೆ ಸಂಬಂಧ ಪಟ್ಟ ಉಪವಿಭಾಗಗಳ ಸಹಾಯಕ ಆಯುಕ್ತರು ಕಡ್ಡಾಯವಾಗಿ ಹಾಜರಾಗಿರಬೇಕೆಂದು ಸೂಚಿಸಿದ್ದಾರೆ.

ಜಿಲ್ಲೆಯಾದ್ಯಂತೆ ಸರ್ಕಾರ ವಿವಿಧ ಪಿಂಚಣಿ ಸೌಲಭ್ಯಗಳನನು ಪಡೆಯುತ್ತಿರುವ ಫಲಾನುಭವಿಗಳ ಸಮೀಕ್ಷಾ ಕಾರ್ಯದಲ್ಲಿ ಗುರುತಿಸಲಾದ ಅನರ್ಹ ಫಲಾನುಭವಿಗಳಿಗೆ ಸಂಬಂಧ ಪಟ್ಟ ತಹಸೀಲ್ದಾರರು ಬರುವ ನವೆಂಬರ್ ೧೦ರೊಳಗೆ ಅನರ್ಹತೆ ಸೂಚನಾ ಪತ್ರ ಕಳಿಸಬೇಕು. ಈ ಕಾರ್ಯವನ್ನು ಎಲ್ಲಾ ತಹಸೀಲ್ದಾರ ಗಂಭೀರವಾಗಿ ಪರಿಗಣಿಸಿ ಪ್ರಥಮಾಧ್ಯತೆ ಮೇಲೆ ಕ್ರಮಕೈಗೊಳ್ಳಬೇಕು ತಪ್ಪಿದಲ್ಲಿ ಸೂಕ್ತ ಕ್ರಮ ಜರುಗಿಸಲಾಗುವುದು ಇದಲ್ಲದೆ. ಅರ್ಹ ಫಲಾನುಭವಿಗಳ ಪಟ್ಟಿಯನ್ನು ಸಂಬಂಧಿಸಿದ ಜಿಲ್ಲೆ ಹಾಗೂ ಉಪ ಖಜಾನೆಗಳಿಗೆ ಕಳುಹಿಸಬೇಕೆಂದು[೬೦] ಅವರು ಸೂಚಿಸಿದ್ದಾರೆ.

## ೪.೬. ರೈತ ಆತ್ಮಹತ್ಯೆ ಚಳವಳಿ

ಮಾನಸಿಕ ಶಕ್ತಿಯ ಕುಸಿತ ಮನೋಬಲದ ನಿಶ್ಯಕ್ತಿ ಆತ್ಮಹತ್ಯೆಗೆ ನಾಂದಿ. ಇದಕ್ಕೆ ಕೇವಲ ವ್ಯಕ್ತಿಯೊಬ್ಬನ ಮಾನಸಿಕಬಲವನ್ನಷ್ಟೇ ಗುರಿ ಮಾಡುವುದು ಕಷ್ಟ, ಮಾನಸಿಕ, ಭೌತಿಕ ಹಾಗೂ ಭಾವಾವೇಶಿಕ ಸುಗಮ ಲಭ್ಯ ಸಂದರ್ಭಗಳು ವ್ಯಕ್ತಿಯ ಧನಾತ್ಮಕ ಕ್ರಿಯೆ-ಪ್ರಕ್ರಿಯೆಗಳಿಗೆ, ಕಾರಣವಾಗಿರುತ್ತದೆ. ಮಾನವನಲ್ಲಿ ಮನೋಧರ್ಮಗಳು, ಧ್ಯೇಯಗಳು. ಧೈರ್ಯ ಆಸಕ್ತಿಗಳು ಇರುವಂತೆ ನಿರಾಸೆ, ದೌರ್ಬಲ್ಯ, ಸಂಘರ್ಷ, ಅಸೂಯೆ, ವ್ಯಾಮೋಹ, ಅಧೈರ್ಯ ಮಾನಸಿಕ ಕುಸಿತಗಳೂ ಇರುತ್ತವೆ. ಈ ಹಿನ್ನೆಲೆಯಲ್ಲಿ ಆತ್ಮಹತ್ಯೆ ವಿಶೇಷತಃ ಪ್ರಚಲಿತ ರೈತರ ಆತ್ಮಹತ್ಯೆಯ ಮನೋ ವೈಜ್ಞಾನಿಕ ವಿವೇಚನೆಯನ್ನು ಮಾಡಬೇಕಾಗುತ್ತದೆ, ವ್ಯಕ್ತಿತ್ವದ ಬೆಳಕಿನ ಸಂದರ್ಭಗಳನ್ನು ವಿಶ್ಲೇಷಿಸಬೇಕಾಗುತ್ತದೆ.[೬೧] ನೋವಿನ ಕಾರಣವನ್ನು ತಿಳಿಯಬೇಕಾಗುತ್ತದೆ. ರೈತರ ಆತ್ಮಹತ್ಯೆ ಒಂದು ರೀತಿಯಲ್ಲಿ ಸುಪ್ತಪ್ರಜ್ಞಾ ಪ್ರತಿಭಟನೆಯ ಆಯಾಮವನ್ನು ಪಡೆದಿದೆ.

ಅಂದರೆ ಬದುಕಿನ ಅಸ್ತಿತ್ವ ಮತ್ತು ಸಾವಿನ ಆಗಮನಗಳ ನಡುವೆ ಅದರ ಮುಖಾಮುಖಿ ನಡೆಯುತ್ತಿರುತ್ತದೆ. ಆತ್ಮಹತ್ಯೆ ಎಂಬುದು ಸಮಾಜದ ಸಂಘಟನೆಗೆ ಸಂಘಟಿತ ಮೊತ್ತದ ಪ್ರಮಾಣಕ್ಕೆ

ವಿಲೋಮವಾಗಿದೆ. ಇದು ಮನುಷ್ಯ ವರ್ತನೆಗಳಲ್ಲಿ ಕಾಣಬರುವ ಸ್ಥೈರ್ಯ ಕುಸಿತದ ಉದಾಹರಣೆಯೂ ಆಗುತ್ತದೆ. ಅಂತ ಅನೇಕ ಬಾರಿ ಆತ್ಮಹತ್ಯೆಯ ಯೋಜನೆಯ ಅನುಕ್ರಮದ ಮೊತ್ತವು ಅಂತಿಮ ಹಂತದಲ್ಲಿ ಉನ್ಮಾದ ತತ್‌ಕ್ಷಣ ಕ್ರಿಯೆಯಾಗಿ ಕಾಣಿಸಿಕೊಳ್ಳುವುದುಂಟು.

ವ್ಯಕ್ತಿಗಳಲ್ಲಿ ಮನೋದೈಹಿಕ ಉದ್ವೇಶ ಅಸಹಾಯಕತೆ ಆತಂಕಗಳಿಂದ ಕಾಯ ನಿರುತ್ಸಾಹ, ನಿರಾಶೆ, ಆಸಕ್ತಿ ಕುಸಿತ, ಬದುಕಲು ಉತ್ಸಾಹ ರಾಹಿತ್ಯ ಕಾಣಿಸಿಕೊಳ್ಳಬಹುದು. ಇಲ್ಲಿ ಆರ್ಥಿಕ, ಸಾಮಾಜಿಕ ಹಾಗೂ ಮಾನಸಿಕ ಮಾರ್ಪಾಟುಗಳ ಕಾರಣಗಳೂ ಇರಬಹುದು. ಸಂಪನ್ಮೂಲಗಳ ಹಾನಿ, ಕೌಟುಂಬಿಕ ಹಾಗೂ ಸಾಮಾಜಿಕ ತೊಂದರೆಗಳೂ ಇಲ್ಲಿ ಪಾತ್ರಧಾರಿಗಳಾಗಿರಬಹುದು. ಹೀಗಾಗಿ ಸ್ಥೈರ್ಯ ಕುಸಿತ, ನಿರಾಶೆಯ ಕಾರಣಗಳನ್ನು ಆತ್ಮಹತ್ಯೆಗೆ ತಳಕು ಹಾಕುವುದು.

ವ್ಯಕ್ತಿಯ ಮಾನಸಿಕವಾದ ಸ್ವಘಾತವು ಅನ್ಯರಿಗೆ ಪ್ರೇರಣಾತ್ಮಕವಾಗದಿರಬೇಕಾದರೆ ಸಾಮಾಜಿಕ ಅನುಕಂಪ, ಮೈತ್ರಿ, ಸಹನೆಯ ಅಗತ್ಯದ ಅರಿವಾಗುತ್ತದೆ. ವಿಶೇಷತಃ ರೈತರ ಆತ್ಮಹತ್ಯೆಯ ಸಂದರ್ಭದಲ್ಲಿ ಅವನ ನೆರೆಹೊರ್ಕೆ ಸಮಾಜೋ ಆಡಳಿತ ಘಟಕಗಳಾದ ಅಧಿಕಾರಿವರ್ಗ, ಸರ್ಕಾರ, ಅವನನ್ನು ಪ್ರತಿನಿಧಿಸುವ ನಾಯಕ ಶಾಸಕ ವರ್ಗ ಅವನ ಮೇಲೆ ತೋರುವ ಒಲುಮೆ, ಸಾಂದರ್ಭಿಕ ಸಹಾಯ, ಬೆಂಬಲ ಇವೆಲ್ಲ ಅವನಲ್ಲಿ ಜೀವನೋತ್ಸಾಹ ಬೆಳೆಸುವಂತಾಗುತ್ತದೆ, ಮತ್ತೊಬ್ಬರಿಗೆ ಆತ್ಮಹತ್ಯೆ ಪ್ರೇರಣೆಗಳ ನಿರಸನವಾಗುತ್ತದೆ. ವಾದ ತಾತ್ವಿಕ ಅನುಸಂಧಾನಕ್ಕಿಂತ ವಾಸ್ತವ ಅನುಕಂಪ, ನೆರವು ಇಲ್ಲಿ ರೈತರ ಬದುಕನ್ನು ನಲಿವುಗೊಳಿಸುತ್ತದೆ. ಬಯಕೆಯಲ್ಲಿ ರೈತ ಏಕಾಂಗಿಗೊಳಿಸಲ್ಪಟ್ಟರೆ ರೈತ ಆತ್ಮಹತ್ಯೆ ಮಾಡಿಕೊಳ್ಳುತ್ತಾನೆ.[೩೮]

ಭವಿಷ್ಯತ್ತಿನ ಪರ್ಯಾಯ ಮಾರ್ಗ ರೈತನಿಗೆ ಕಾಣದಾಗ ಇಂಥ ಆತ್ಮಹತ್ಯೆ ಆಗಬಹುದು. ಮಾನದಿಂದ ಬಾಳುವೆ ಮಾಡುವುದು ಒಂದು ಸಾಮಾಜಿಕ ಮೌಲ್ಯ, ಅದಕ್ಕೆ ಎಲ್ಲಾ ಕಡೆ ಎರವಾದಾಗ ಏಕಾಂಗಿತನ ಅನುಭವಿಸುವ ರೈತ ನಿರಾಸೆಯ ಭವಿಷ್ಯತ್ತಿನ ಸ್ಥಿತಿಯಲ್ಲಿ ದಿಕ್ಕೂ ತೋಚದೆ ಪ್ರಾಣವನ್ನು ಬಲಿಯಾಗಿಸುತ್ತಾನೆ. ಇಲ್ಲಿ ಬೇಕಾದ್ದು ಸಾಮಾಜಿಕ ಆಸರೆ, ಸರ್ಕಾರದ ಒತ್ತಾಸೆ ಕಾಣದ ರೈತರ ಇದೊಂದು ರೀತಿ ಸಾಮಾಜಿಕ, ಆಡಳಿತ ಧೋರಣೆಗೆ ತೋರುವ ಪ್ರಜ್ಞಾ ಪ್ರತಿಭಟನೆ, ಅರ್ಥಾತ್ ಪ್ರಜ್ಞೆಯನ್ನು ಕೆಟಕುವ ಪ್ರತಿಭಟನೆ, ರೈತ ಒಬ್ಬ ಜೀವಿಯಾಗಿ ಅದರ ಪಾಲದಾರ. ಅಂತಾಗಿ ರೈತನನ್ನು ಏಕಾಂಗಿತನಕ್ಕೆ ಬಿಡದೆ ಆತ್ಮ ಸ್ಥೈರ್ಯದ ಬೆಳವಣಿಗೆಗೆ ಆತ್ಮವಿಶ್ವಾಸದ ಪರಿಸರಕ್ಕೆ ಸಾಮಾಜಿಕ ವಿಶ್ವಾಸಕ್ಕೆ ಆಡಳಿತವೂ ಬದ್ಧ ಎಂಬ ಸನ್ನಿವೇಶ ನಿರ್ಮಿಸಿದರೆ ಆತ್ಮಹತ್ಯೆಯ ಪ್ರಕರಣಗಳು ಏನೇ ಕಾರಣಗಳಿರಲಿ ತಡೆದುಕೊಳ್ಳಬಹುದು.

೧೯೯೮ರಲ್ಲಿ ಗುಲಬರ್ಗಾ ಜಿಲ್ಲೆಯಲ್ಲಿ ಬೆಳೆದ ತೊಗರಿ ಬೆಳೆ ನಾಶವಾಗಿ ೧೦-೧೨ ಜನ ರೈತರು ವಿಷ ಸೇವಿಸಿ ಪ್ರಾಣ ಕಳೆದುಕೊಂಡಿದ್ದಾರೆ. ಬೆಳೆದಂಥ ಬೆಳೆ ಸಂಪೂರ್ಣ ನಾಶವಾಗಿ ೧೦-೧೨ ಜನ ಪ್ರಾಣ ಕಳೆದುಕೊಂಡಿರುವುದು ಇದು ಇತಿಹಾಸದಲ್ಲಿ ಮೊದಲ ಸಲ ಕಂಡು ಬಂದಿದೆ. ರೈತರು ಬೆಳೆದ ಬೆಳೆ ಹಾನಿಗೊಂಡು ಪ್ರಾಣಕಳೆದುಕೊಂಡವರಿಗೆ ಸರ್ಕಾರ ಪರಿಹಾರ ಕೊಡಲಿಲ್ಲ.

ಈ ಪ್ರದೇಶದಲ್ಲಿ ಬಿದ್ದ ಅನಿರೀಕ್ಷಿತ ಮಳೆಯ ಕಾರಣ ತೊಗರಿ, ಸೂರ್ಯಕಾಂತಿ, ಕಡಲೆ ಹಾಗೂ ರಬಿ ಕ್ರಾಪ್, ಬೆಳೆಗಳು ಸಂಪೂರ್ಣ ಹಾಳಾದವು ರೈತರು ಮಾಡಿದ ಸಾಲವನ್ನು ತೀರಿಸಲಾಗದೆ ಪ್ರಾಣಹತ್ಯೆ ಮಾಡಿಕೊಂಡಿದ್ದಾರೆ. ಸರ್ಕಾರ ಈ ಬಗ್ಗೆ ಯಾವುದೇ ಕ್ರಮ ತೆಗೆದುಕೊಂಡಿಲ್ಲ. ರೈತನಲ್ಲಿ ಏನು ಕಳವಳ ಉಂಟಾಗಿದೆ. ೧೯೯೭ನೇ ಸಾಲಿನಲ್ಲಿ ಇಲ್ಲಿ ಕೆಲವು ಭಾಗಗಳಲ್ಲಿ ಅತಿವೃಷ್ಟಿಯಿಂದ ಹಾಗೂ ಕೆಲವಡೆ ಅನಾವೃಷ್ಟಿಯಿಂದ ವಿಶೇಷವಾಗಿ ದ್ವಿದಳದಾನ್ಯಗಳ ಹಾಳಾಗಿವೆ. ಸಾಲ ಮಾಡಿ ರೈತರು ಗೊಬ್ಬರ ತಂದು ಹಾಕಿ ಬೆಳೆ ಉಳಿಸಿಕೊಳ್ಳುವ ರೈತರ ಪ್ರಯತ್ನ ಸಫಲವಾಗಲಿಲ್ಲ. ಆದ್ದರಿಂದ ೧೦.೩.೧೯೯೮ರಂದು ಕರ್ನಾಟಕ ಪ್ರಾಂತ ರೈತ ಸಂಘಟನೆ ಮತ್ತು ಇಲ್ಲಿನ ರೈತರ ಗುಲಬರ್ಗದಲ್ಲಿ ಪ್ರತಿಭಟನೆಯನ್ನು ಮಾಡಿದರು. ಅಂದರೆ ಮೃತಪಟ್ಟ ರೈತರ ಕುಟುಂಬಕ್ಕೆ ಪರಿಹಾರ ನೀಡಬೇಕು ಮತ್ತು ಹಾನಿಯಾದ ಬೆಳೆಗಳ ಸಾಲ ಮನ್ನಾ ಮಾಡಬೇಕು ಎಂದು ಉಗ್ರವಾಗಿ ಆಗ್ರಹಿಸಿದರು.

ಗುಲಬರ್ಗಾ ಜಿಲ್ಲೆಯಲ್ಲಿ ಸುಮಾರು ೨,೩೬,೮೮೮ ಎಕರೆ ಬಿತ್ತನೆಯ ಪ್ರದೇಶದಲ್ಲಿ ೯೩,೬೪೨ ಹೆಕ್ಟೇರ್ ಪ್ರದೇಶದ ಬೆಳೆ ನಾಶವಾಗಿದೆ. ಕೋಟ್ಯಾಂತರ ರೂಪಾಯಿಗಳ ಬೆಳೆ ನಷ್ಟವಾಗಿರುವ ಬಗ್ಗೆ ಸರ್ಕಾರಕ್ಕೆ ಅಧಿಕಾರಿಗಳಿಂದ ವರದಿ ಹೋಗಿದೆ. ರೈತರಿಗೆ ಬ್ಯಾಂಕ್‌ನಿಂದ, ಖಾಸಗಿಯಾಗಿ ಹಾಗೂ ಕೀಟನಾಶಕ ಔಷಧಿ ಅಂಗಡಿಯಿಂದ ತೆಗೆದುಕೊಂಡ ಸಾಲದ ಭಾರ ಸಹಿಸಲಾಗಲಿಲ್ಲ. ಆದ್ದರಿಂದ ಅನೇಕ ರೈತರು ಆತ್ಮಹತ್ಯೆ ಮಾಡಿಕೊಂಡಿದ್ದಾರೆ. ಈ ಪ್ರದೇಶದಲ್ಲಿ ರೈತರು ರೈತರಲ್ಲವೆ. ಈ ಬೆಳೆ ಹಾನಿ ಕಾರಣ ಆತ್ಮಹತ್ಯೆಗಳಿಗೆ, ಸರ್ಕಾರ ಹಾಗೂ ಅಧಿಕಾರಿಗಳ ನಿರ್ಲಕ್ಷ್ಯವೇ ಕಾರಣ ಎಂದು ರೈತರ ಮತ್ತು ರೈತ ಸಂಘದ ಕೂಗಾಗಿತ್ತು.

ಈ ಪ್ರದೇಶದ ರೈತರು ಬಡ್ಡಿಗೆ ತೆಗೆದುಕೊಂಡು ನಿಮ್ಮಗೆ ಹೊಡೆದು ಬುದ್ಧಿಕಲಿಸಲಾಗುತ್ತದೆಯೊ ಅಲ್ಲಿ, ಅಂಕಿ ಅಂಶಗಳನ್ನು ಗುಲಬರ್ಗಾ ಜಿಲ್ಲೆಗೆ ಸಂಬಂಧಿಸಿದಂತೆ ಅಂದಾಜು ಮಾಡಿದರೆ ಅಲ್ಲಿ ಸುಮಾರು ೨೫೦ ರೂಪಾಯಿಗಳನ್ನು ಕೀಟನಾಶಕ್ಕಾಗಿ ಬೆಲೆತೆತ್ತು ಬೆಳೆಗಳನ್ನು ಉಳಿಸಲು ರೈತರು ಪ್ರಯತ್ನಿಸಿದ್ದಾರೆ. ಈ ಜಿಲ್ಲೆಯಲ್ಲಿ ಸುಮಾರು ೨೫-೪೦ ಕೋಟಿ ರೂಪಾಯಿಗಳಷ್ಟು ಬೆಳೆ ನಾಶವಾಗಿದೆ. ನಾವು ಹಿಂದೆ ರೈತರ ಪರವಾಗಿ ಸಂಘಟನೆಯು ಗುಲಬರ್ಗಾದಲ್ಲಿ ಒಂದು ತಿಂಗಳ ಧರಣಿ ಮಾಡಿದ್ದಕ್ಕಾಗಿ ೧೦ ಕೋಟಿ ರೂಪಾಯಿಗಳನ್ನು ಪರಿಹಾರಕ್ಕಾಗಿ ಬಿಡುಗಡೆ ಮಾಡಿದ್ದರು.

ಆತ್ಮಹತ್ಯೆ ಮಾಡಿಕೊಂಡವರ ಕುಟುಂಬಕ್ಕೆ ಪರಿಹಾರ ಸಾಕಷ್ಟು ಪರಿಹಾರ ನೀಡಲು ಸರ್ಕಾರ ಮುಂದಾಗದೆ ದೊಡ್ಡ ಅನ್ಯಾಯ ಮಾಡಿದೆ. ಇದಕ್ಕಾಗಿ ಗುಲಬರ್ಗಾದಲ್ಲಿ ರೈತರು ಒಂದು ದೊಡ್ಡ ಚಳುವಳಿಯನ್ನು ಮಾಡಬೇಕಾಯಿತು. ೧೯೯೮ ಡಿಸೆಂಬರ್ ಏಳನೇ ತಾರೀಖು ಸುಮಾರು ೫ ಸಾವಿರ ರೈತ ಸೇರಿ ಉಗ್ರವಾದ ಪ್ರತಿಭಟನಾ ರ್‍ಯಾಲಿ ಮಾಡಿದಾಗ ಆತ್ಮಹತ್ಯೆ ಮಾಡಿಕೊಂಡ ಕುಟುಂಬಕ್ಕೆ ಪರಿಹಾರ ನೀಡಲು ಸರ್ಕಾರ ಮುಂದಾಯಿತು.

ಗುಲ್ಬರ್ಗ ಜಿಲ್ಲೆಯಲ್ಲಿ ಹೆಚ್ಚಾಗಿ ಬೆಳೆಯುವ ಬೆಳೆ ತೊಗರಿಬೆಳೆಗೆ ಕಳಪೆ ಔಷಧಿಯ ಸರಬರಾಜಿನಿಂದಾಗಿ ತೊಗರಿ ಬೆಳೆ ನಾಶವಾಗಿದೆ. ರೈತರು ಆತ್ಮಹತ್ಯೆ ಮಾಡಿಕೊಂಡಿದಕ್ಕೆ ಒಂದು ಕಾರಣವಿದೆ. ಅನೇಕರು

ಆತ್ಮಹತ್ಯೆಯಾದಾಗ ಬಾಕಿ ಸಲುವಾಗಿ ಸತ್ತರು ಎಂದು ಅಂದುಕೊಳ್ಳಬಾರದು ಎಂದು ಮರ್ಯಾದೆಯನ್ನು ಮುಚ್ಚಿಕೊಳ್ಳಬೇಕೆಂದು ಹಾಗೆಯೇ ಮಣ್ಣು ಮಾಡಿದ್ದಾರೆ. ರೋಣ ಗ್ರಾಮದಲ್ಲಿ ವರ್ಷದಲ್ಲಿ ರೈತರಿಗೆ ಬಂದ ಬೆಳೆ ಬರಲಿಲ್ಲವೆಂದರೆ ಅವರು ಮುಂದೆ ಜೀವನ ನಡೆಸುವುದಕ್ಕೆ ಸಾಧ್ಯವಿಲ್ಲ.

ಕಳಪೆ ಗುಣಮಟ್ಟದ ಔಷಧಿಯಿಂದ ತೊಗರಿ ಬೆಳೆಯಲ್ಲಿದೆ ಬೇರೆ ಬೆಳೆಗಳೂ ನಾಶವಾಗುತ್ತವೆ. ಅದಕ್ಕಾಗಿ ರೈತರು, ರೈತ ಸಂಘಟನೆಗಳು ಸತ್ಯಾಗ್ರಹ ಮಾಡುವುದರ ಮೂಲಕ ಸರ್ಕಾರವನ್ನು ಎಚ್ಚರಿಸಿದರು. ಸರ್ಕಾರ ಈ ದಿಕ್ಕಿನಲ್ಲಿ ಗಮನ ಹರಿಸಲಿಲ್ಲ. ಇದಕ್ಕಾಗಿ ರೈತರು ಸತ್ಯಾಗ್ರಹ ನಡೆಸುತ್ತಿದ್ದು ಸರ್ಕಾರದ ಪರಿಹಾರಕ್ಕಾಗಿ ಕಾಯುತ್ತಿದ್ದಾರೆ. ಪರಿಹಾರ ಸಿಗದೆ ಅನೇಕ ಮಂದಿ ಸಾವಿಗೆ ಶರಣಾಗುವ ಸಂಗತಿ ಉಂಟಾಗಿತ್ತು.

ಗುಲಬರ್ಗಾ ಜಿಲ್ಲೆಯಲ್ಲಿ ತೊಗರಿ ಬೆಳೆ ಹಾನಿಯಿಂದ ಕಷ್ಟಕೀಡಾಗಿರುವ ರೈತರುಗಳಿಗೆ ಪರಿಹಾರ ಒದಗಿಸಿಕೊಡುವ ವಿಷಯ ಪರಿಶೀಲನೆಯಲ್ಲಿದೆ. ರೈತರು ಮತ್ತುಸಾರ್ವಜನಿಕರು, ಜಿಲ್ಲಾಧಿಕಾರಿಗಳಿಗೆ ಬೆಳೆಹಾನಿ ಬಗ್ಗೆ ಮನವಿ ನೀಡಿದ್ದಾರೆ. ಬೆಳೆ ಹಾನಿಯಿಂದ ಗುಲಬರ್ಗಾ ಜಿಲ್ಲೆಯಲ್ಲಿ ೧೩,೪೫೫.೨೯ ಲಕ್ಷ ರೂಪಾಯಿ ಬೆಳೆ ಹಾನಿ ಹಾಗೂ ಸತ್ತವರಿಗೆ ಪರಿಹಾರ ನೀಡಬೇಕೆಂದು ೩೭.೩.೧೯೯೮ರಂದು ಕರ್ನಾಟಕ ಪ್ರಾಂತ ರೈತ ಸಂಘಟನೆ ಮತ್ತು ರೈತರು ಸೇರಿಕೊಂಡು ರಸ್ತೆ ಚಳವಳಿಯ ಮೂಲಕ ಜಿಲ್ಲಾಧಿಕಾರಿಗಳಿಗೆ ಮನವಿ ಸಲ್ಲಿಸಿದರು.

೧೯೯೭-೯೮ರ ಅವಧಿಯಲ್ಲಿ ಖಾರಿಫ್ ಬೆಳೆಹಾನಿಯಿಂದ ಅನೇಕ ರೈತರು ಗುಲಬರ್ಗಾ ಜಿಲ್ಲೆಯಲ್ಲಿ ಆತ್ಮಹತ್ಯೆ ಮಾಡಿಕೊಂಡಿರುವ ವಿಷಯದ ಬಗ್ಗೆ ಮಾಹಿತಿ ಪಡೆದ ಸರ್ಕಾರ, ರೈತರಿಗೆ ತೊಗರಿ ಬೆಳೆಯು ಶೇ ೫೦ರಷ್ಟು ಹಾನಿಗೀಡಾಯಿತು. ಈ ಬಗ್ಗೆ ರೈತರ ಪರವಾಗಿ ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗದ ಮುಂದೆ ವಿಷಯ ಮಂಡಿಸಿದೆ. ೧೦.೦೮.೧೯೯೮ರಂದು ಅದು ಕರ್ನಾಟಕದ ಸರ್ಕಾರಕ್ಕೆ ಪರಿಹಾರ ಬಿಡುಗಡೆ ಮಾಡಲು ಆದೇಶ ನೀಡಿತು. ಆದರೆ ಸರ್ಕಾರ ವತಿಯಿಂದ ರೈತರನ್ನು ಕೊಟ್ಟಷ್ಟು ಪಡೆದುಕೊಳ್ಳದಿದ್ದರೆ ಜೈಲು ಶಿಕ್ಷೆ ಆದೀತು. ಚಳವಳಿ ಮಾಡಕೂಡದು ಎಂದೆಲ್ಲ ಹೆದರಿಸಲಾಯಿತ್ತು ಈ ಘಟನೆಯಿಂದ ಬೇಸತ್ತ ರೈತರು, ರೈತ ಮುಖಂಡರು, ರೈತ ಸಂಘಟನೆಗಳು ಹಾಗೂ ಕರ್ನಾಟಕ ಪ್ರಾಂತ ರೈತ ಸಂಘದವರು ೬.೬.೧೯೯೮ರಂದು ಜಿಲ್ಲಾಧಿಕಾರಿಗಳ ಕಛೇರಿ ಮುಂದೆ ಧರಣಿ ಕುಳಿತು ಬೇಡಿಕೆಗಳು ಈಡೇರುವವರೆಗೆ ಧರಣಿ ವಾಪಸ್ ಪಡೆಯುವುದಿಲ್ಲ ಎಂದು ಪ್ರತಿಭಟನೆ ಆರಂಭಿಸಿದರು. ೧೯೯೭-೯೮ರ ಸಾಲಿನಲ್ಲಿ ರಾಜ್ಯದ ಎಲ್ಲೆಡೆ ಅದರಲ್ಲೂ ವಿಶೇಷವಾಗಿ ಈ ಪ್ರದೇಶದಲ್ಲಿ ಪ್ರಕೃತಿ ವೈಪರಿತ್ಯಕ್ಕೀಡಾಗಿತ್ತು. ಕಳಪೆ ಬೀಜ ಹಾಗೂ ಕೀಟನಾಶಕ ಔಷಧಿಗಳ ಬಳಕೆಯಿಂದಾಗಿ ಬೆಳೆಗಳಿಗೆ ಬಹಳ ಹಾನಿ ಆಯಿತು. ಇದರಿಂದ ತೀವ್ರ ಆರ್ಥಿಕ ಹಾಗೂ ಮಾನಸಿಕ ಸಂಕಷ್ಟಕ್ಕೆ ರೈತರು ಈಡಾದರೂ. ಇಂಥ ಅಸಹಾಯಕ ಸ್ಥಿತಿಯಲ್ಲಿ ರೈತರು ಆತ್ಮಹತ್ಯೆ ಮಾಡಿಕೊಂಡರು ಎಂದು ರೈತರು ಮತ್ತು ಸಂಘಟನೆಗಳ ಪ್ರತಿಕ್ರಿಯೆಯಾಗಿತ್ತು.

೧೨.೮.೨೦೦೧ ಗುಲಬರ್ಗಾ ಜಿಲ್ಲೆಯ ಆಳಂದ ತಾಲ್ಲೂಕಿನ ವೈಜಾಪುರ ಗ್ರಾಮದ ರೈತ ಶರಣಯ್ಯ ರಾಚಯ್ಯ ಹಂಗರಗಿಮಠ (೫೫) ಕೃಷಿ ಹಾಗೂ ಇತರೆ ಖರ್ಚಿಗೆಂದು ೧ ಲಕ್ಷಕ್ಕೂ ಹೆಚ್ಚು ಸಾಲಮಾಡಿಕೊಂಡಿದ್ದ. ಸಾಲದ ಹೊರೆ ತಾಳಲಾರದೆ ಮನೆಯಲ್ಲಿದ್ದ ಕೀಟನಾಶಕ ಕುಡಿದು ಸಾವನ್ನಪ್ಪಿದ.

೨.೧.೨೦೦೩ರಂದು ಆತ್ಮಹತ್ಯೆ ಮಾಡಿಕೊಂಡ ಏಳು ಜನರೈತರಲ್ಲಿ ಒಬ್ಬ ವಿಷ ಕುಡಿದು. ಇನ್ನೊಬ್ಬ ರೈತ ಬಸವರಾಜ ಚಿತ್ತಾಪುರ (ತಾ) ಹೊಸೂರಿನ ಹಲವಾರು ವರ್ಷಗಳ ಹಿಂದೆ ಪ್ರಾಥಮಿಕ ಮತ್ತು ಸಹಕಾರಿ ಭೂ ಅಭಿವೃದ್ಧಿ ಬ್ಯಾಂಕ್ ಹಾಗೂ ಕೈಗಡ ಸಾಲ ಸಾವಿರಾರು ರೂಪಾಯಿ ಪಡೆದು ಹೆಸರು, ಉದ್ದು ಬಿತ್ತಿದರೂ ಮಳೆಯಿಂದ ಫಸಲು ಕೊಚ್ಚಿಹೋಗಿ ಹಾನಿಯಾಯಿತು. ಘಾಸಿಗೊಂಡ ಮನಸ್ಸಿನಿಂದ ಕಂಠಪೂರ್ತಿ ಮದ್ಯ ಕುಡಿದು ನೇಣು ಹಾಕಿಕೊಂಡು ಸತ್ತ.

ತೊಗರಿ ಬೆಳೆಗೆ, ರೇಷ್ಮೆ ಬೆಳೆಗೆ ಸರಿಯಾದ ಫಸಲು ಬರಲಿಲ್ಲ ಮತ್ತು ಸಾಲದ ಹೊರೆಯಿಂದ ಹಾಗೂ ಬ್ಯಾಂಕ್ ಸಾಲದ ವಸೂಲಿಗಾಗಿ ಬಂದ ಅಧಿಕಾರಿಗಳು ಬಣ್ಣದ ಟಿ.ವಿ ಇಟ್ಟಿದ್ದ ಶರಣಪ್ಪ ನಾಟೀಕಾರನ ಮನೆಯ ಕೋಣೆಗೆ ಬೀಗ ಜಡಿದು ಹೋದರು. ತೊಗರಿಗೆ ಹೊಡೆಯಲು ಇಟ್ಟಿದ್ದ ಕೀಟನಾಶಕ ಸೇವಿಸಿ ಶರಣಪ್ಪ ಮರಣ ಹೊಂದಿದನು. ಹಾಗೆ ಇನ್ನೊಬ್ಬ ಮಳೆ ಆಧಾರಿತ ಕೃಷಿ ಬೆಳೆ, ಮಳೆ ಬರದೆ ತಳಮಳ, ಮಳೆ ಬಂದರೂ ಬೆಳೆಗೆ ಬೆಲೆ ದಕ್ಕುವುದೇ ಎಂಬ ಆತಂಕ. ಈ ಹಿನ್ನೆಯಲ್ಲಿ ಆತ್ಮಹತ್ಯೆ ಮಾಡಿಕೊಂಡ ಸಣ್ಣ ಮತ್ತು ಮಧ್ಯಮ ವರ್ಗದ ರೈತ ೧೮ ಎಕರೆ ಹೊಲ ಪರಿಶಿಷ್ಟ ಜಾತಿ ಕೊಡದೂರ ಗ್ರಾಮದ ಮಸ್ತಾನಪ್ಪ ಅವರು ಮೈ ತುಂಬಾ ಸಾಲ ಮಳೆ ಇಲ್ಲದೆ ಬರಗಾಲದ ಸಾಲಗಾರರ ಕಾಟದ ನಡುವೆ ಜೀವ ಬಿಟ್ಟ, ೩೬ ಎಕರೆ ಹೊಲ ಇದ್ದರೂ ಬೆಳೆದ ಸಾಲ ಗುಡ್ಡವಾದ ಬಡ್ಡಿ ಕಂಡು ಹತಾಶೆಗೆ ಸಿಕ್ಕು ಹಿಪ್ಪರಿಗಿಯ ಭರಮಣ್ಣ ಬನ್ನಿ ಮರಕ್ಕೆ ನೇಣುಹಾಕಿಕೊಂಡು ಆತ್ಮಹತ್ಯೆ ಮಾಡಿಕೊಂಡನು. ಇನ್ನೊಬ್ಬ ರೈತ ಶಿವಲಿಂಗಪ್ಪ ಕೊಂಬಣ್ಣ ೪೦ ಗುಲಬರ್ಗಾ ತಾಲೂಕಿನ ಅಂಕಲಗಿ ಗ್ರಾಮದವನಾದ ಇವನು ಹೈದರಬಾದ ಬ್ಯಾಂಕಿನಲ್ಲಿ ೧ ಲಕ್ಷ ರೂಪಾಯಿ ಸಾಲ ಪಡೆದಿದ್ದನು. ೨೦೦೩ನೇ ಸಾಲಿನ ಬೆಳೆ ನಾಶದಿಂದ ಇತನು ಸಾಲಕ್ಕೆ ಹೇದರಿ ಮತ್ತು ತೊಗರಿ ಬೆಳೆ ಹಾನಿಯಿಂದ ನೊಂದುಕೊಂಡು ಇತನು ಹೊಲಕ್ಕೆ ಹೋಗಿ ಮರಕ್ಕೆ ನೇಣುಹಾಕಿಕೊಂಡು ಆತ್ಮಹತ್ಯೆ ಮಾಡಿಕೊಂಡನು. ಈ ರೈತರ ಆತ್ಮಹತ್ಯೆಗೆ ಬರಗಾಲ ಮತ್ತು ಬೆಳೆಹಾನಿಯಿಂದ ಸಾಲದ ಬಾಧೆಯಿಂದ ಹಲವಾರು ರೈತರ ಸಮಸ್ಯೆಯಿಂದ ಇವರು ಆತ್ಮಹತ್ಯೆ ಮಾಡಿಕೊಂಡಿದ್ದಾರೆ. ಆದ್ದರಿಂದ ಇವರ ಕುಟುಂಬಗಳಿಗೆ ಪರಿಹಾರ ಕೊಡುವಂತೆ ಗುಲಬರ್ಗಾದಲ್ಲಿ ರೈತ ಸಂಘಟನೆಗಳು ಮತ್ತು ರಾಜಕೀಯ ಮುಖಂಡರು ಸೇರಿಕೊಂಡು ೩೦.೧೧.೨೦೦೩ರಂದು ಬೃಹತ್ ಪ್ರತಿಭಟನೆಯ ಮೂಲಕ ಜಿಲ್ಲಾಧಿಕಾರಿಗಳಿಗೆ ಮನವಿಯನ್ನು ಸಲ್ಲಿಸಿದರು.[೬] ಈ ಮನವಿಯ ಪತ್ರದ ಆಧಾರದ ಮೇಲೆ ರಾಜ್ಯ ಸರ್ಕಾರ ರೈತರ ಆತ್ಮಹತ್ಯೆ ಅಧ್ಯಯನದ ತಜ್ಞರ ಸಮಿತಿ ನೇಮಕ ಮಾಡಿದರು. ಇದರ ಅಧ್ಯಕ್ಷರಾದ ಡಾ.ಜಿ.ಕೆ.ವೀರೇಶ ಅವರು ಗುಲಬರ್ಗಾದಲ್ಲಿ ಸುದ್ಧಿಗಾರರೊಡನೆ ಮಾತನಾಡುತ್ತ ಆತ್ಮಹತ್ಯೆ ಎಂದು ಹೇಳಲಾಗುವ ಎಲ್ಲಾ ರೈತರ ಪ್ರಕರಣಗಳನ್ನು ಸಮಿತಿ ಪರಿಶೀಲಿಸಿ ಕುಟುಂಬದವರೊಡನೆ ಮಾತುಕತೆ ನಡೆಸಿದ ನಂತರ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ ನಂತರ ಮರಣಹೊಂದಿದವರ

ಕುಟುಂಬಗಳಿಗೆ ೧ ಲಕ್ಷ ರೂಪಾಯಿ ಪರಿಹಾರವು ನೀಡಿತು. ಇದು ರೈತ ಸಂಘಟನೆಯ ಹೋರಾಟ ಫಲವೆಂದು ಹೇಳಬಹುದು.

ಗುಲ್ಬರ್ಗಾದಲ್ಲಿ ರ‍್ಯಾಲಿ ನಡೆಸುವ ಮೂಲಕ ರೈತರ ಆತ್ಮಹತ್ಯೆ ತಡೆಯಲು ಕೃಷಿ ಉತ್ಪನ್ನಗಳಿಗೆ ಬೆಂಬಲ ಬೆಲೆ, ಸಬ್ಸಿಡಿ ಹೆಚ್ಚಿಸಬೇಕು ಎಂದು ಸರ್ಕಾರಕ್ಕೆ ಆಗ್ರಹಿಸಿದರು. ೧೧.೭.೨೦೦೮ರಲ್ಲಿ ನಡೆದ ರ‍್ಯಾಲಿ ಸರ್ಕಾರ ಗಮನ ಸೆಳೆಯಿತು. ಇದರಿಂದ ರೈತರ ಆತ್ಮಹತ್ಯೆ ತಡೆಯಬಹುದು ಎಂದು ರೈತರ ಸಂಘಟನೆ ಗುರಿಯಾಗಿತು.[೪೦]

೧೪.೧೧.೨೦೦೮ರಂದು ಸಾಲದ ಬಾಧೆಯಿಂದ ಆತ್ಮಹತ್ಯೆ ಮಾಡಿಕೊಂಡ ದೇವನೂರ ಗ್ರಾಮದ ರೈತ ಶರಣಪ್ಪ ಯಡ್ರಾಮಿಗೆ ಇವರ ಕುಟುಂಬಕ್ಕೆ ಸರ್ಕಾರದಿಂದ ಐದು ಲಕ್ಷ ರೂಪಾಯಿ ಪರಿಹಾರ ನೀಡಬೇಕೆಂದು ೧೬.೧೨.೨೦೦೮ರಂದು ಕರ್ನಾಟಕ ಪ್ರಾಂತ ರೈತ ಸಂಘ ಜೇವರ್ಗಿ ಘಟಕದ ವತಿಯಿಂದ ತಾಲೂಕು ಕಛೇರಿ ಮುಂದೆ ಧರಣಿ ಮಾಡಿ ಸಮಿತಿ ಒತ್ತಾಯಿಸಿದೆ.[೪೧] ತೊಗರಿ ಬೆಳೆಗಾಗಿ ಬ್ಯಾಂಕು ಮತ್ತು ಖಾಸಗಿಯವರಲ್ಲಿ ಸಾಲ ಮಾಡಿಕೊಂಡಿದ್ದ ಈ ರೈತ ತೊಗರಿ ಬೆಳೆ ಹಾನಿಯಾಗಿದ್ದರಿಂದ ಆತ್ಮಹತ್ಯೆಗೆ ಶರಣಾದ ಎಂದು ಸಮಿತಿ ಹೇಳಿದೆ. ಸಾಲದಲ್ಲಿ ಸಿಲುಕಿದ ಮೃತ ಶರಣಪ್ಪನ ಕುಟುಂಬಕ್ಕೆ ಪರಿಹಾರ ನೀಡಬೇಕೆಂದು ಪ್ರಾಂತ ರೈತ ಸಂಘದ ಸಮಿತಿಯು ಆಗ್ರಹಿಸಿದ್ದಾರೆ.[೪೨] ಈ ಪ್ರಕರಣವನ್ನು ಆತ್ಮಹತ್ಯೆ ಮೃತನ ಪತ್ನಿ ಮತ್ತುಐವರು ಮಕ್ಕಳಿದ್ದಾರೆ ಎಂದು ಜೇವರ್ಗಿ ಠಾಣೆಯಲ್ಲಿ ಪ್ರಕರಣ ದಾಖಲಾಗಿದೆ. ಹೀಗೆ ಆತ್ಮಹತ್ಯೆಗೆ ಒಳಗಾಗಿರುವರ ರೈತರಿಗೆ ಪರಿಹಾರ ನೀಡಬೇಕು ಮತ್ತು ಆತ್ಮಹತ್ಯೆಗೆ ತಡೆಯುವಂತೆ ಸರ್ಕಾರ ಹಲವಾರು ಯೋಜನೆ ರೂಪಿಸಬೇಕು ಮತ್ತು ಬೆಳೆ ನಾಶವಾದಾಗ ಪರಿಹಾರ ಮತ್ತು ವಿಮೆ ಬೇಗನೆ ಜಾರಿ ಮಾಡಿದರೆ ರೈತರು ಆತ್ಮಹತ್ಯೆ ತಡೆಯಲು ಸಾಧ್ಯ ಎಂದು ಸರ್ಕಾರಕ್ಕೆ ರೈತ ಸಂಘಟನೆಗಳ ಮನವಿಯಾಗಿತ್ತು.

### ೪.೭. ಬೆಳೆ ವಿಮೆಗಾಗಿ ಚಳವಳಿ

ಬರಗಾಲ, ಪ್ರವಾಹ ಮುಂತಾದವುಗಳಿಂದ ಬೆಳೆ ನಷ್ಟವಾದ ಸಂದರ್ಭಗಳಲ್ಲಿ ರೈತರಿಗೆ ಹಣ ಸಹಾಯ ಒದಗಿಸುವ ಉದ್ದೇಶದಿಂದ ಬೆಳೆ ವಿಮಾ ಯೋಜನೆಯನ್ನು ೧೯೮೫ರಲ್ಲಿ ಪ್ರಾರಂಭಿಸಲಾಯಿತು.[೪೩] ರಾಜ್ಯದ ೧೭೪ ತಾಲೂಕುಗಳಲ್ಲಿ ಯಳಂದೂರ ತಾಲೂಕು ಹೊರತು ೧೯೮೫ ರಿಂದೀಚೆಗೆ, ರಾಗಿ, ಜೋಳ, ಮುಸುಕಿನ ಜೋಳ, ಗೋಧಿ, ಸಜ್ಜೆ, ಕಡಲೆ, ನೆಲಗಡಲೆ, ಸೂರ್ಯಕಾಂತಿ ಮತ್ತು ಕುಸುಬೆ ಬೆಳೆಗಳಿಗೆ ಈ ಯೋಜನೆಯು ಜಾರಿಯಲ್ಲಿದೆ. ರೈತರ ವಿಮಾಕಂತಿನ ಶೇ. ೫೦ರಷ್ಟು ಸಹಾಯ ಧನದಲ್ಲಿ ಪಾಲ್ಗೊಳ್ಳುವುದರಲ್ಲಿ ಭಾಗವಹಿಸುತ್ತದೆ. ಈ ಯೋಜನೆ ಅನುಷ್ಠಾನದ ದಿನದಿಂದ ೧೯೯೧ರ ಡಿಸೆಂಬರ್ ಅಂತ್ಯದವರೆಗೆ ಈ ನಿಧಿಗೆ ಕೊಡಲಾದ ವಂತಿಗೆ ೫೮೩.೪೨ ಲಕ್ಷ ರೂಪಾಯಿಗಳು ಮತ್ತು ಸಣ್ಣ ಹಾಗೂ ಅತಿ ಸಣ್ಣ ರೈತರಿಗೆ ಹಕ್ಕು ಪಾವತಿ ಮತ್ತು ರಿಯಾತಿಯಾಗಿ ೫೪೨.೩೫ ರೂಪಾಯಿಗಳನ್ನು ಪಾವತಿ ಮಾಡಿದೆ. ೧೯೯೨ರ ಡಿಸೆಂಬರ್ ಅಂತ್ಯದವರೆಗೆ ೧.೮೪ಲಕ್ಷ ರೈತರಿಂದ ೫.೭೨೭.೫೨ ಲಕ್ಷ

ರೂಪಾಯಿಗಳು ವಿಮೆಗೆ ೩.೨೬ ಲಕ್ಷ ಹೆಕ್ಟೇರ್ ಪ್ರದೇಶದಲ್ಲಿ ೮೫.೮೪ ಲಕ್ಷ ರೂಪಾಯಿಗಳ ವಿಮಾಕಂತನ್ನು ಸಂಗ್ರಹಿಸಲಾಗಿದೆ.[೪೪] ಮತ್ತು ಇದರಲ್ಲಿ ೯೨.೧೯೬ ಸಣ್ಣ ಮತ್ತು ಅತಿ ಸಣ್ಣ ರೈತರು ಸೇರಿದ್ದಾರೆ. ೧೯೯೨-೯೩ರಲ್ಲಿ ಭಾರತ ಸರ್ಕಾರವು ಯಾವುದಾದರೊಂದು ಜಿಲ್ಲೆಯಲ್ಲಿ ಎಲ್ಲಾ ರೈತರ ಮತ್ತು ಬೆಳೆಗಳ ಮೇಲೆ ಹಾಗೂ ಗಂಡಾಂತರಗಳ ವಿರುದ್ಧ ವಿಮಾ ಕಂತಿನ ನಿಜದರವನ್ನು ವಿಧಿಸುವ ಒಂದು ಪ್ರಾಯೋಗಿಕ ಕಾರ್ಯ ಯೋಜನೆಯನ್ನು ಪ್ರಾರಂಭಿಸಲು ಪ್ರಸ್ತಾಪ ಮಾಡಿದೆ.

ಗುಲಬರ್ಗಾ ಜಿಲ್ಲೆಯಲ್ಲಿ ೧೯೯೩ರಲ್ಲಿ ಇಂಥದೇ ತೊಗರಿಬೇಳೆ ಹಾನಿ ಸಂದರ್ಭದಲ್ಲಿ ತೊಗರಿ ಬೆಳೆದಂಥ ರೈತರು ಒಂದು ಸಮ್ಮೇಳನ ಮಾಡಿ ಸರ್ಕಾರಕ್ಕೆ ಅಹವಾಲು ಸಲ್ಲಿಸಿದ್ದರು. ಆಗ ಸರ್ಕಾರ ೧೦-೧೨ ಕೋಟಿ ರೂಪಾಯಿ ಪರಿಹಾರ ರಿಲೀಫ್ ನೀಡಿತ್ತು. ಈ ಬಾರಿಯೂ ತೊಗರಿ ಬೆಳೆವ ರೈತರಿಗೆ ಅಪಾರ ಹಾನಿ ಆಗಿದೆ. ಮಾನ್ಯ ಮುಖ್ಯಮಂತ್ರಿಗಳು ಬೀದರ್‌ಗೆ ಬಂದಿದ್ದಾಗ, ಕೇಂದ್ರ ಸರ್ಕಾರ ೨೫ ಕೋಟಿ ರೂಪಾಯಿ ಕೊಟ್ಟಿದ್ದರೂ, ಚುನಾವಣೆ ಸಂದರ್ಭದಲ್ಲಿ ಬಿಡುಗಡೆ ಮಾಡುವಂತಿಲ್ಲ ಎಂದಿದ್ದರು. ಆದರೆ ಅದೇ ಸಮಯದಲ್ಲಿ ಆಂಧ್ರ ಸರ್ಕಾರ ತೊಗರಿ ಬೆಳೆ ನಷ್ಟದ ರೈತರಿಗೆ ಎಕರೆವೊಂದಕ್ಕೆ ೪೦೦ ರೂಪಾಯಿಗಳಂತೆ ಪರಿಹಾರ ನೀಡಿತು. ದೊಡ್ಡದಾಗಿ ಹಾನಿ ಆದ ವಿಶೇಷ ಸಂದರ್ಭವಾಗಿರುವುದರಿಂದ ಗುಲಬರ್ಗಾದ ತೊಗರಿ ಬೆಳೆಗಾರರಿಗೆ ಆಗಿರುವ ಆ ನಷ್ಟವನ್ನು ಸರ್ಕಾರ ತುಂಬಿಕೊಡಬೇಕೆಂದು ಪ್ರತಿಭಟನೆ ಸತ್ಯಾಗ್ರಹ ಹಾಗೂ ಬೆಳೆ ವಿಮೆ ಜಾರಿ ಮಾಡುವಂತೆ ೧೧.೩.೧೯೯೮ರಂದು ಸರ್ಕಾರಕ್ಕೆ ಧಿಕ್ಕಾರ ಹಾಕಿ ಹೋರಾಟಕ್ಕೆ ರಸ್ತೆಗೆ ಬಂದರು.[೪೫]

೧೯೯೭-೯೮ರ ಸಾಲಿನಲ್ಲಿ ತೊಗರಿ ಬೆಳೆ ನಷ್ಟಕ್ಕೆ ಸಣ್ಣ, ಅತಿಸಣ್ಣ ರೈತರಿಗೆ ನೀಡಿದ ಪರಿಹಾರಧನ, ಕೇಂದ್ರ ಅಧ್ಯಯನ ತಂಡವು, ರಾಜ್ಯದ ಭೇಟಿ ಮಾಡಿದಾಗ ೨೫೦ ಕೋಟಿ ವಿಶೇಷ ನೆರವಿಗೆ ಮಾಡಿದ ವರದಿಯ ಶಿಫಾರಸ್ಸಿನ ಅನ್ವಯ ಮಿತಿ ಸರ್ಕಾರದ ನಿರ್ಧಾರ ಬೆಳೆಹಾನಿ ಕಾರಣ ಉಂಟಾದ ಸಾವಿನ ಪ್ರಕರಣದಲ್ಲಿ ಸಮಿತಿಯ ಶಿಫಾರಸ್ಸಿನಂತೆ ಒಂದು ಲಕ್ಷ ರೂಪಾಯಿ ಪರಿಹಾರ ಧನ ನೀಡಿದೆ.

೨೫.೫.೧೯೯೮ರ ಸರ್ಕಾರಿ ಆದೇಶ ಸಂಖ್ಯೆಗನುಗುಣವಾಗಿ ಗುಲಬರ್ಗಾ ಜಿಲ್ಲೆಯ ತಾಲ್ಲೂಕಿನಲ್ಲಿ ಶೇ. ೫೦ಕ್ಕೂ ಮೀರಿದ ಪ್ರಮಾಣದಲ್ಲಿ ತೊಗರಿ ಬೆಳೆ ಹಾನಿಗೊಳಗಾಗಿದ್ದ ರೈತರಿಗೆ ಪ್ರತಿ ಹೆಕ್ಟೇರಿಗೆ ೭೫೦ ರೂಪಾಯಿಯಂತೆ ಗರಿಷ್ಠ ೩೦೦೦ ರೂಪಾಯಿಯನ್ನು ಗರಿಷ್ಠ ೪ ಹೆಕ್ಟೇರ್ ವರೆಗೆ ಬೆಲೆ ವಿಮಾ ಯೋಜನೆಗೆ ಒಳಪಟ್ಟ ರೈತರನ್ನು ಹೊರತು ಪಡಿಸಿ ಪರಿಹಾರ ಧನಕ್ಕೆ ಮಂಜುರಾತಿ ನೀಡಲಾಗಿತ್ತು. ೨.೧೧.೧೯೯೭ರಲ್ಲಿ ಬಿದ್ದ ಅಧಿಕ ಮಳೆ ಕಾರಣ ಕೀಟ ಬಾಧೆಗೊಳಗಾಗಿ ತೊಗರಿ ಬೆಳೆ ನಷ್ಟಗೊಂಡ ರೈತರ ಮನವಿ ಜಿಲ್ಲಾಧಿಕಾರಿಗಳ ವರದಿ ಗಮನಿಸಿ ಸಹಾಯ ನೀಡಲು ಸರ್ಕಾರ ನಿರ್ಧರಿಸಿತು.[೪೬]

೧.೨.೨೦೦೩ರಂದು ಬೆಳೆ ವಿಮೆಯನ್ನು ಜಾರಿಗೆ ತರುವಂತೆ ಅಫಜಲಪುರ ತಾಲೂಕು ಕಛೇರಿ ಎದುರು ಕರ್ನಾಟಕ ಪ್ರಾಂತ್ಯ ರೈತ ಸಂಘಟನೆ ಪ್ರತಿಭಟನೆ ಮಾಡಿದರು.[೪೭] ಹಾಗೇ ದಿನಾಂಕ ೭.೧.೨೦೦೪ರಂದು ಜೇವರ್ಗಿ ತಹಸೀಲ್ದಾರ್ ಕಛೇರಿಗೆ ನುಗ್ಗಿದ ಎತ್ತು ಬಂಡಿ, ಪರಿಸ್ಥಿತಿ ಉದ್ರಿಕ್ತಗೊಂಡಿತು.

ಹಾನಿಗೀಡಾದ ತೊಗರಿ ಬೆಳೆಗೆ ಕೂಡಲೇ ಪರಿಹಾರ ಒದಗಿಸಬೇಕು ಮತ್ತು ಬೆಳೆ ವಿಮೆ ಜಾರಿ ಮಾಡುವಂತೆ ಬೇಡಿಕೆಗಳಿಗೆ ಆಗ್ರಹಿಸಿ ಬುಧವಾರ ರೈತರು ತಮ್ಮ ಬಂಡಿಗಳ ಮೂಲಕ ತಹಸೀಲ್ದಾರ್ ಕಛೇರಿಗೆ ನುಗ್ಗಿದ್ದರಿಂದ ಅಲ್ಲಿ ಉದ್ರಿಕ್ತ ಪರಿಸ್ಥಿತಿ ಉಂಟಾಗಿತು.[೭೮]

೨೦೦೪ರಲ್ಲಿ ಹಾನಿಗೊಳಗಾಗಿರುವ ತೊಗರಿಗೆ ನೂರಕ್ಕೆ ನೂರರಷ್ಟು ಬೆಳೆ ವಿಮೆ ಹಣ ನೀಡುವ ಸಂಬಂಧ ಮುಂದಿನ ಸಂಪುಟ ಸಭೆಯಲ್ಲಿ ಚರ್ಚಿಸಲಾಗುವುದು ಎಂದು ಧರ್ಮಸಿಂಗ್ ಭರವಸೆ ನೀಡಿದರು.[೭೯] ವಾಣಿಜ್ಯ ಬ್ಯಾಂಕುಗಳು ಹಾಗೂ ಸಹಕಾರ ಸಂಸ್ಥೆಗಳ ಮೂಲಕ ಪಡೆದಿರುವ ಸಾಲದಿಂದ ನೂರಕ್ಕೆ ನೂರರಷ್ಟು ವಿಮೆ ಹಣ ಮಂಜೂರು ಮಾಡಬೇಕು ಎಂದು ರೈತರು ಸರ್ಕಾರದ ಮುಂದಿಟ್ಟರು.

ಗುಲಬರ್ಗಾದಲ್ಲಿ ಜನವರಿ ೧೨.೨೦೦೪ರಂದು ಇನ್ನು ಕೆಲವು ಬೇಡಿಕೆಗಳಿಗೆ ಸರ್ಕಾರದ ನಕಾರಾತ್ಮಕ ಧೋರಣೆಯಿಂದಾಗ ೨೧ರಿಂದ ಆಮರಣ ಉಪವಾಸ ಸತ್ಯಾಗ್ರಹ ಪ್ರಾರಂಭಿಸಲು ನಿರ್ಧರಿಸಲಾಗಿದೆ ಎಂದು ಜಿಲ್ಲಾ ಜಾತ್ಯಾತೀತ ಜನತಾದಳದ ಮುಖಂಡ ಕೇದಾರಲಿಂಗಯ್ಯ ಹಿರೇಮಠ ಅವರು ಪತ್ರಿಕೆ ವರದಿಗೆ ಮಾಹಿತಿ ನೀಡಿದರು.[೮೦]

ಜೇವರ್ಗಿ ಮತ್ತು ಚಿಂಚೋಳಿಯಲ್ಲಿ ರೈತರ ಪ್ರತಿಭಟನೆ ೧೬.೧೧.೨೦೦೪ರಂದು ಕರ್ನಾಟಕ ಪ್ರಾಂತ ರೈತ ಸಂಘದ ಸದಸ್ಯರು ಧರಣಿ ನಡೆಸಿದರು. ೨೦೦೨-೦೩ರಲ್ಲಿ ಬೆಳೆ ವಿಮೆ ಮಾಡಿಸಿದ ರೈತರಿಗೆ ವಿಮೆ ಹಣ ಬಿಡುಗಡೆ ಮಾಡಬೇಕು ಎಂದು ರೈತ ಸಂಘ ಆಗ್ರಹಿಸಿದೆ.[೮೧]

ಮುಂಗಾರು ಬೆಳೆ ವಿಮೆ ಜಾರಿಗೆ ತರುವಂತೆ ಹಾಗೂ ರೈತರ ಸಾಲ ಮನ್ನಾ ಮಾಡುವಂತೆ ಆಗ್ರಹಿಸಿ ಆಗಸ್ಟ್ ೩೦.೨೦೦೮ರಂದು ಜೇವರ್ಗಿ ತಹಸೀಲ್ದಾರ್ ಕಛೇರಿಯ ಮುಂದೆ ಧರಣಿ ಸತ್ಯಾಗ್ರಹ ಹಮ್ಮಿಕೊಳ್ಳಲಾಗಿದೆ. ಎಂದು ಕರ್ನಾಟಕ ಪ್ರಾಂತ ರೈತ ಸಂಘದ ತಾಲ್ಲೂಕು ಘಟಕದ ಅಧ್ಯಕ್ಷ ಸುಭಾಷ್ ಹೊಸಮನಿ, ಅವರು ತಿಳಿಸಿದ್ದಾರೆ.[೮೨] ಈ ವರ್ಷ ಮುಂಗಾರು ಮಳೆ ಸಂಪೂರ್ಣವಾಗಿ ಬಾರದೇ ಎಳ್ಳು, ಶೇಂಗಾ ಮುಂತಾದ ಬೆಳೆಗಳು ಬಾಡಿಹೋಗಿ ರೈತರು ಸಾಲ ಸಾಲ ಮಾಡಿ ಭೂಮಿಗೆ ಬಿತ್ತಿದ ಬೀಜ, ಗೊಬ್ಬರ ಕೈಗೆ ಬಾರದೇ ಕಂಗಾಲಾಗಿದ್ದಾರೆ. ತೊಗರಿ ಮತ್ತು ಹೆಸರು ಒಕ್ಕಲುತನಕ್ಕೆ ಮೂಲ ಹಣದ ಬೆಳೆಯಾಗಿದ್ದು ಈ ಬೆಳೆಗಳು ಇಲ್ಲವೇ ಒಕ್ಕಲುತನ ಇಲ್ಲವೇ ಇಲ್ಲಾ ಎನ್ನುವಂತಹ ಪರಿಸ್ಥಿತಿ ಬಂದಿದೆ ಎಂದು ತೀವ್ರ ಆತಂಕ ವ್ಯಕ್ತ ಪಡಿಸಿದ್ದಾರೆ.

ಈಗ ಮಳೆ ಬರುತ್ತಿರದ ಕಾರಣ ಶೇಂಗಾ ಮುಂತಾದ ಬೆಳೆಗಳಿಗೆ ಪರಿಹಾರ ಕೊಟ್ಟು ವಿಮೆ ಜಾರಿಗೆ ತರಬೇಕು ಎಂದು ಕರ್ನಾಟಕ ಪ್ರಾಂತ ರೈತ ಸಂಘಟನೆಯವರು ತಾಲೂಕು ಕಛೇರಿ ಎದುರುಗಡೆ ಉಗ್ರವಾದ ಪ್ರತಿಭಟನೆ ಮಾಡಿ ವಿಮೆ ಜಾರಿಗೆ ತರುವಂತೆ ಒತ್ತಾಯಿಸಿದ್ದಾರೆ.

## ಕೊನೆಟಿಪ್ಪಣಿಗಳು

೦೧. ನಾಗರಾಜ್ ಎಂ.ಜಿ., 'ಕರ್ನಾಟಕ ರೈತ ಚಳುವಳಿ-ಸತ್ಯಾಗ್ರಹಗಳು', ಸಂಪುಟ-೨, ಪುಟ-೧೬೧

೦೨. ವಿಜಯ ಟಿ.ಪಿ., ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ ಚರಿತ್ರೆ-೪, ಪುಟ-೮೬೪-೬೫

೦೩. ನಾಗರಾಜ ಎಂ.ಜಿ., 'ಕರ್ನಾಟಕ ರೈತ ಚಳುವಳಿ-ಸತ್ಯಾಗ್ರಹಗಳು', ಸಂಪುಟ-೨, ಪುಟ-೩೬೨

೦೪. ೧೭.೩.೧೯೮೩ರ ಪ್ರಜಾವಾಣಿ ಪತ್ರಿಕೆ

೦೫. ನಾಗರಾಜ ಎಂ.ಜಿ., 'ಕರ್ನಾಟಕ ರೈತ ಚಳುವಳಿ-ಸತ್ಯಾಗ್ರಹಗಳು', ಸಂಪುಟ-೨, ಪುಟ-೩೬೨

೦೬. ವಾಸುದೇವನ್ ಸಿ.ಎಸ್., ಹಂಪಿ ಪರಿಸರದ ಕೆರೆಗಳು, ಪುಟ-

೦೭. ಅನಂತರಾಮ ರಾವ್ .ಕೆ (ಸಂ)., 'ಸುವರ್ಣ ಕರ್ನಾಟಕ ದರ್ಶನ', ಪುಟ-೧೮೯

೦೮. ೧.೧.೨೦೦೪, ಕಲಬುರ್ಗಿವಾಣಿ ಪತ್ರಿಕೆ, ಪುಟ-೭

೦೯. ೯.೧.೨೦೦೪ರ ಸಂಯುಕ್ತ ಕರ್ನಾಟಕ ಪತ್ರಿಕೆ, ಪುಟ-೬

೧೦. ೧೦.೧.೨೦೦೪ರ ಪ್ರಜಾವಾಣಿ ಪತ್ರಿಕೆ, ಪುಟ-೧

೧೧. ೧೬.೧.೨೦೦೪ರ ಸಂಯುಕ್ತ ಕರ್ನಾಟಕ ಪತ್ರಿಕೆ, ಪುಟ-೨

೧೨. ೩೦.೧.೨೦೦೪ರ ಸಂಯುಕ್ತ ಕರ್ನಾಟಕ ಪತ್ರಿಕೆ, ಪುಟ-೨

೧೩. ೩೦.೧.೨೦೦೪ರ ಪ್ರಜಾವಾಣಿ ಪತ್ರಿಕೆ, ಪುಟ-೨

೧೪. ೩.೧.೨೦೦೩ರ ಪ್ರಜಾವಾಣಿ ಪತ್ರಿಕೆ, ಪುಟ-೩

೧೫. ೭.೧.೨೦೦೪ರ ಸಂಯುಕ್ತ ಕರ್ನಾಟಕ ಪತ್ರಿಕೆ, ಪುಟ-೬

೧೬. ೭.೫.೨೦೦೫ರ ವಿಜಯಕರ್ನಾಟಕ ಪತ್ರಿಕೆ, ಪುಟ-೩

೧೭. ೨೮.೧೦.೨೦೦೬ರ ವಿಜಯಕರ್ನಾಟಕ ಪತ್ರಿಕೆ, ಪುಟ-೪

೧೮. ೧೦.೧೨.೨೦೦೧ರ ಪ್ರಜಾವಾಣಿ ಪತ್ರಿಕೆ, ಪುಟ-೨

೧೯. ನಾಗರಾಜ ಎಂ.ಜಿ., 'ಕರ್ನಾಟಕ ರೈತ ಚಳುವಳಿ-ಸತ್ಯಾಗ್ರಹಗಳು', ಸಂಪುಟ-೩, ಪುಟ-೫೬೩

೨೦. ಅದೇ, ಪುಟ-೪೬೪

೨೧. ೧.೧೦.೨೦೦೪ರ ಪ್ರಜಾವಾಣಿ ಪತ್ರಿಕೆ, ಪುಟ-೨

೨೨. ೧.೧೦.೨೦೦೪ರ ವಿಜಯಕರ್ನಾಟಕ ಪತ್ರಿಕೆ, ಪುಟ-೨

೨೩. ೨.೧೦.೨೦೦೪ರ ಕ್ರಾಂತಿ ಪತ್ರಿಕೆ, ಪುಟ-೩

೨೪. ನಾಗರಾಜ ಎಂ.ಜಿ., 'ಕರ್ನಾಟಕ ರೈತ ಚಳುವಳಿ-ಸತ್ಯಾಗ್ರಹಗಳು', ಸಂಪುಟ-೩, ಪುಟ-೫೯೧

೨೫. ಅದೇ, ಪುಟ-೫೯೨

೨೬. ಅದೇ, ಪುಟ-೪೮೧

೨೭. ೩೦.೧೨.೨೦೦೩ರ ಪ್ರಜಾವಾಣಿ ಪತ್ರಿಕೆ, ಪುಟ-೨

೨೮. ೪.೧.೨೦೦೪ರ ವಿಜಯಕರ್ನಾಟಕ ಪತ್ರಿಕೆ, ಪುಟ-೨

೨೯. ೪.೧.೨೦೦೪ರ ಸಂಯುಕ್ತ ಕರ್ನಾಟಕ ಪತ್ರಿಕೆ, ಪುಟ-೩

೩೦. ೮.೧.೨೦೦೪ರ ಪ್ರಜಾವಾಣಿ ಪತ್ರಿಕೆ, ಪುಟ-೨

೩೧. ನಾಗರಾಜ ಎಂ.ಜಿ., 'ಕರ್ನಾಟಕ ರೈತ ಚಳುವಳಿ-ಸತ್ಯಾಗ್ರಹಗಳು', ಸಂಪುಟ-೩, ಪುಟ-೩೬೩

೩೨. ಅದೇ, ಪುಟ-೫೪೦

೩೩. ೨೯.೧೧.೨೦೦೧ರ ಪ್ರಜಾವಾಣಿ ಪತ್ರಿಕೆ, ಪುಟ-೨

೩೪. ೧೩.೧೨.೨೦೦೧ರ ವಿಜಯಕರ್ನಾಟಕ ಪತ್ರಿಕೆ, ಪುಟ-೨

೩೫. ೭.೧೦.೨೦೦೭ರ ಕ್ರಾಂತಿ ಪತ್ರಿಕೆ, ಪುಟ-೩

೩೬. ೭.೧೦.೨೦೦೭ರ ಸಂಯುಕ್ತ ಕರ್ನಾಟಕ ಪತ್ರಿಕೆ, ಪುಟ-೩

೩೭. ನಾಗರಾಜ ಎಂ.ಜಿ., 'ಕರ್ನಾಟಕ ರೈತ ಚಳುವಳಿ-ಸತ್ಯಾಗ್ರಹಗಳು', ಸಂಪುಟ-೩, ಪುಟ-೬೮೬

೩೮. ಅದೇ, ಪುಟ-೬೮೯

೩೯. ೩೦.೧೧.೨೦೦೩ರ ಪ್ರಜಾವಾಣಿ ಪತ್ರಿಕೆ, ಪುಟ-೨

೪೦. ೧೧.೭.೨೦೦೮ರ ಕನ್ನಡಪ್ರಭಾ ಪತ್ರಿಕೆ, ಪುಟ-೩

೪೧. ೧೬.೧೨.೨೦೦೮ರ, ಸಂಜೆವಾಣಿ, ಪತ್ರಿಕೆ, ಪುಟ-೨

೪೨. ೧೭.೧೨.೨೦೦೮ರ, ಸುದ್ದಿಮೂಲ, ದಿನಪತ್ರಿಕೆ, ಪುಟ-೪

೪೩. ಕರ್ನಾಟಕ ರಾಜ್ಯ ಗ್ಯಾಸೆಟಿಯರ್, ದಶವಾರ್ಷಿಕ ಪುರವಣಿಗೆ ೧೯೯೬, ಪುಟ-೧೩೭

೪೪. ಅದೇ, ಪುಟ-೧೩೭

೪೫. ನಾಗರಾಜ ಎಂ.ಜಿ., 'ಕರ್ನಾಟಕ ರೈತ ಚಳುವಳಿ-ಸತ್ಯಾಗ್ರಹಗಳು', ಸಂಪುಟ-೩, ಪುಟ-೭೧೬

೪೬. ಅದೇ, ಪುಟ-೭೪೪

೪೭. ೨.೨.೨೦೦೩ರ, ಪ್ರಜಾವಾಣಿ ಪತ್ರಿಕೆ, ಪುಟ-೨

೪೮. ೮.೧.೨೦೦೪ರ, ಪ್ರಜಾವಾಣಿ ಪತ್ರಿಕೆ, ಪುಟ-೨

೪೯. ೧೧.೧.೨೦೦೪ರ, ಸಂಯುಕ್ತ ಕರ್ನಾಟಕ ಪತ್ರಿಕೆ, ಪುಟ-೩

೫೦. ೧೩.೧.೨೦೦೪ರ, ವಿಜಯಕರ್ನಾಟಕ ಪತ್ರಿಕೆ, ಪುಟ-೨

೫೧. ೧೮.೧೧.೨೦೦೪ರ, ಕ್ರಾಂತಿ ಪತ್ರಿಕೆ ಪ್ರಕಟಣೆ, ಪುಟ-೩

೫೨. ೩೧.೮.೨೦೦೯ರ, ಸಂಯುಕ್ತ ಕರ್ನಾಟಕ ಪತ್ರಿಕೆ, ಪುಟ-೨

## ಅಧ್ಯಾಯ - ಐದು

# ರೈತರ ಸಮಸ್ಯೆಗಳು ಮತ್ತು ಸಮಕಾಲೀನ ಸ್ಥಿತಿ-ಗತಿಗಳು

ವ್ಯವಸಾಯವು ಮಾನವನ ಪುರಾತನ ವೃತ್ತಿಗಳಲ್ಲೊಂದಾಗಿದೆ. ಒಂದು ಕಾಲದಲ್ಲಿ "ಕೋಟಿ ವಿದ್ಯೆಗಿಂತ ಮೇಟಿ ವಿದ್ಯೆಮೇಲು" ಎಂಬ ವ್ಯಾಖ್ಯೆ ಕೃಷಿಯ ಬದುಕಿಗೆ ಇದ್ದ ಗೌರವವನ್ನು ಸೂಚಿಸುತ್ತದೆ. ಆದರೆ ಇಂದು ಬೇಸಾಯ ಎಂದರೆ ನಾಸಾಯ, ನೀಸಾಯ, ಮನೆಮಂದಿಯೆಲ್ಲಾ ಸಾಯ ಎನ್ನುವಂತಾಗಿದೆ. ಇಂದು ಪ್ರತಿಯೊಬ್ಬ ರೈತನು ಸಾಲದಲ್ಲಿ ಹುಟ್ಟಿ ಸಾಲದಲ್ಲಿ ಸಾಯುವ ಪರಿಸ್ಥಿತಿ ಇದೆ. ಒಂದು ಅಂದಾಜಿನ ಪ್ರಕಾರ ಮೂವತ್ತೆರಡು ನಿಮಿಷಕ್ಕೊಬ್ಬ ರೈತ ಆತ್ಮಹತ್ಯೆ ಮಾಡಿಕೊಳ್ಳುತ್ತಿದ್ದಾನೆ. ಕೃಷಿ ಸಾಲ, ಸಾಮಾಜಿಕ ಸಂಸ್ಥೆಗಳ ವಿಫಲತೆ, ಸಡಿಲಗೊಳ್ಳುತ್ತಿರುವ ಸಾಮಾಜಿಕ ಭದ್ರತೆ, ದುಶ್ಚಟಗಳು, ಮಕ್ಕಳ ಮದುವೆಯ ಸಾಲ, ಅನಾರೋಗ್ಯ, ಬಗೆಹರಿಯದ ಕುಟುಂಬ ಸಮಸ್ಯೆಗಳು ಇತ್ಯಾದಿಗಳು ರೈತರ ಆತ್ಮಹತ್ಯೆಗೆ ಕಾರಣಗಳಾಗಿವೆ.[೧] ಈ ರೈತರ ಆತ್ಮ-ಹತ್ಯೆಗಳು ಕೇವಲ ಕರ್ನಾಟಕಕ್ಕೆ ಮಾತ್ರ ಸೀಮಿತವಾಗಿಲ್ಲ. ಅಥವಾ ಒಂದು ಪ್ರದೇಶಕ್ಕೆ ಸೀಮಿತವಾಗಿಲ್ಲ ಇಂದು ಭಾರತದ ತುಂಬ ರೈತರು ಆತ್ಮಹತ್ಯೆ ಮಾಡಿಕೊಂಡಿರುವುದನ್ನು ನಾವು ಮಾಧ್ಯಮಗಳ ಮೂಲಕ ನೋಡುತ್ತೇವೆ ಮತ್ತು ದಿನ ಪತ್ರಿಕೆಗಳಲ್ಲಿ ಸಹ ಓದುತ್ತೇವೆ. ಇಂಥ ಸಾವಿಗೆ ಹಲವಾರು ಕಾರಣಗಳುಂಟು. ೧೯೯೬-೨೦೦೫ರ ನಡುವೆ ಕನಿಷ್ಠ ಒಂದುವರೆ ಲಕ್ಷಕ್ಕೂ ಹೆಚ್ಚು ಭಾರತದ ವಿವಿಧ ಭಾಗಗಳಲ್ಲಿ ರೈತರು ಆತ್ಮಹತ್ಯೆ ಮಾಡಿಕೊಂಡಿದ್ದಾರೆ.[೨] ಆದೇನೆ ಇದ್ದರೂ ಹಲವು ಸಾವಿರ ವರ್ಷಗಳ ಈ ದೇಶದ ಕೃಷಿ ಇತಿಹಾಸದಲ್ಲಿ ರೈತರು ಕೃಷಿಯಿಂದ ಬದುಕುವ ಭರವಸೆಯನ್ನು ತಾಳಿಕೊಂಡು ಕೊರಗಿ ಕೊರಗಿ ಆತ್ಮಹತ್ಯೆ ಉದಾಹರಣೆಗಳು ಕಡಿಮೆ ಆದರೆ ಇಂದಿನ ಪರಿಸ್ಥಿತಿ ತದ್ವಿರುದ್ಧವಾಗಿದೆ. ಇಂದಿನ ರಾಜಕೀಯ ನೀತಿಗಳು, ವ್ಯಾಪಾರದ ಒಪ್ಪಂದಗಳು ಪ್ರಕೃತಿಯ ವಿಕೋಪಗಳು ಈ ಎಲ್ಲಾ ಸಮಸ್ಯೆಗಳಿಂದ ರೈತರ ಪರಿಸ್ಥಿತಿಯು ಅದೋಗತಿ ಮುಟ್ಟಿದೆ. ಪ್ರಸ್ತುತ ರೈತರ ಸಮಸ್ಯೆಗಳು ಮತ್ತು ಸಮಕಾಲೀನ ಸ್ಥಿತಿಗತಿಗಳನ್ನು ಮುಂದಿನಂತೆ ಅಧ್ಯಯನ ಮಾಡಲಾಗಿದೆ.

## ಗೇಣಿ ರೈತರ ಸಮಸ್ಯೆ

ಗುತ್ತಿಗೆ ಗೇಣಿ ಹಾಗೂ ಪಾಲುಗೇಣಿ ಪದ್ಧತಿ ರಾಜ್ಯದಾದ್ಯಂತ ಬೆಳೆಯುತ್ತಿದೆ. ಒಂದೆಡೆ ಜಾಗತೀಕರಣದ ಭಾಗವಾಗಿ ಕೃಷಿಯ ಬಿಕ್ಕಟ್ಟು ಉಂಟಾಗಿರುವುದರಿಂದ ವ್ಯವಸಾಯ ಲಾಭದಾಯಕವಾಗಿಲ್ಲ. ಅದು ಕೇವಲ ಸಾಲ ಹೊರಿಸುತ್ತದೆ ಎಂದು ಅನೇಕ ಶ್ರೀಮಂತ ಹಾಗೂ ಮಧ್ಯಮ ರೈತರು ಭೂ ಮಾಲೀಕರಂತೆ ಗುತ್ತಿಗೆ, ಗೇಣಿಗೆ, ಇಲ್ಲವೆ ಪಾಲುಗೇಣಿಗೆ ತಮ್ಮ ಜಮೀನನ್ನು ಬಡ ರೈತರಿಗೆ ಕೊಡುತ್ತಾರೆ. ಒಂದಿಷ್ಟು ಗೇಣಿ ಬರಲಿ ಅದು ಲಾಭ, ಸಾಲವಲ್ಲ ಎಂಬ ವಿಶ್ವಾಸ ಅವರದು. ಜಾಗತೀಕ, ಆರ್ಥಿಕ ಬಿಕ್ಕಟ್ಟಿನಿಂದಾಗಿ ನಗರಗಳಲ್ಲೂ ಉದ್ಯೋಗವಕಾಶ ಕುಂಠಿತಗೊಂಡಿದೆ. ಹೀಗಾಗಿ ಸ್ವಲ್ಪ ಮಟ್ಟಿಗೆ ಕೂಲಿ ಕೆಲಸ ಒದಗಿಸುವ ಉದ್ಯೋಗವೆಂದರೆ ಗೇಣಿ ಮಾಡುವುದು. ಆದ್ದರಿಂದ ಬಡರೈತರು ಗೇಣಿ ಮಾಡುತ್ತಾರೆ. ಪ್ರಸ್ತುತ ಮಳೆಗಾಲ, ಬೀಜಗೊಬ್ಬರದ ಬೆಲೆ ಎಲ್ಲವೂ ರೈತರ ಪಾಲಿಗೆ ಹೊರೆಯಾಗಿದೆ. ಸಾಲ ಮಾಡಿ ಭೂ ಒಡೆಯರಿಗೆ ಕೊಟ್ಟು ಬಿತ್ತನೆ ಮಾಡುತ್ತಾನೆ. ತಾನು ಹಾಕಿದ ಬಂಡವಾಳ ಕೈಗೆಟುಕದೆ ಸಾಲದ ಬಾರ ಅವಮಾನದಿಂದ ಆತ್ಮಹತ್ಯೆಗೆ ಶರಣಾಗುತ್ತಾನೆ.

## ಹೆಚ್ಚುತ್ತಿರುವ ಭೂ ಕೇಂದ್ರೀಕರಣ ಬೆಳೆಯುತ್ತಿರುವ ಸಣ್ಣ ರೈತರು

ಜಾಗತೀಕರಣ ಪ್ರಭಾವದಿಂದ ಗ್ರಾಮೀಣ ಪ್ರದೇಶದ ಮೇಲೂ ಪ್ರಭಾವ ಬೀರಿದೆ. ಜಾಗತೀಕರಣದ ಲಾಭ ಪಡೆದ ಭೂ ಮಾಲಿಕ ಬಂಡವಾಳದಾರನ ಬೆಳವಣಿಗೆಯು ಒಂದೆಡೆ. ಇನ್ನಷ್ಟು ಭೂ ಕೇಂದ್ರಿಕರಣವನ್ನು ಮಾಡಿದೆ. ಮತ್ತೊಂದೆಡೆ ಬಡ ರೈತ ಕೂಲಿಕಾರರ ಸಂಕಷ್ಟವನ್ನು ಹೆಚ್ಚಿಸಿದೆ. ಕೇವಲ ಭೂ ಮಾಲಿಕರಾಗಿ ಕೆಲಗೇಣಿ ರೈತರಿಗೆ ಬಡ್ಡಿ ಸಾಲ ನೀಡುತ್ತಿದ್ದವರು ಗ್ರಾಮೀಣ ಪ್ರದೇಶದಲ್ಲಿ ರಾಸಾಯನಿಕ ಗೊಬ್ಬರ ಕ್ರಿಮಿನಾಶಕ, ಬೀಜ ಮಾರಾಟಗಾರರು ಮತ್ತು ರೈತರ ಉತ್ಪನ್ನ ಕೊಳ್ಳುವವರು. ಈ ಬೆಳವಣಿಗೆಯಿಂದ ರೈತರು ತಮಗೆ ಬೇಕಾದ ಬೀಜ ಗೊಬ್ಬರ ಕೊಳ್ಳುವ ಸ್ವಾತಂತ್ರ್ಯ ಕಳೆದುಕೊಂಡಿದ್ದಾರೆ. ಕಳಪೆ ಬೀಜ, ಗೊಬ್ಬರ, ಕ್ರಿಮೀನಾಶಕ ಮಾರಿಮಾರಿ ನಷ್ಟ ಮಾಡುವುದು. ದುಬಾರಿ ಬಡ್ಡಿ ಹಾಕುವುದು. ಬೆಲೆ ಏರಿಸುವುದು. ಮಾರಾಟದ ನಂತರ ತಕ್ಷಣ ಹಣ ನೀಡದೆ ವ್ಯವಹಾರಿಕ ಬಂಡವಾಳವಾಗಿ ಎರಡು ಮೂರು ತಿಂಗಳು ತೊಡಗಿಸುವುದು. ಹೀಗೆ ಮಾಡುವುದರಿಂದ ಸಣ್ಣ ರೈತರು ಹಲವಾರು ಸಮಸ್ಯೆಗಳನ್ನು ಎದುರಿಸಬೇಕಾಗುತ್ತದೆ. ಉತ್ತರ ಕರ್ನಾಟಕದಲ್ಲಿ ಮಧ್ಯಮ ಹಾಗೂ ದೊಡ್ಡ ಹಿಡುವಳಿ ಹೊಂದಿರುವ ಭೂ ಮಾಲಿಕರು ಒಟ್ಟು ಹಿಡುವಳಿದಾರರ ಶೇ ೧೪%ರಷ್ಟಿದ್ದು ಅವರ ಒಟ್ಟು ಜಮೀನು ಶೇ ೪೧% ರಷ್ಟನ್ನು ಹೊಂದಿದ್ದಾರೆ.[೩]

## ನೆರೆ ಹಾವಳಿ-ಬರಗಾಲಗಳು

ಕರ್ನಾಟಕ ರಾಜ್ಯವನ್ನು ಮುಖ್ಯವಾಗಿ ಕಳೆದ ಹತ್ತು ವರ್ಷಗಳಲ್ಲಿ ಏಳು ಬಾರಿ ಬರಗಾಲ ಎರಡು ಮೂರು ಬಾರಿ ಅತಿವೃಷ್ಠಿ ಕಾಡಿದೆ. ಆಗೊಮ್ಮೆ-ಈಗೊಮ್ಮೆ ಸುರಿಯುವ ಮಳೆಯು ಅತಿವೃಷ್ಠಿಯಾಗಿ ಸುರಿದಿದೆ. ಉತ್ತಮ ಮಳೆ ಬಂದು ಕಾಳು ಕಟ್ಟುವ ಸಂದರ್ಭದಲ್ಲಿ ರೋಗಗಳು ಭಾದಿಸಿವೆ. ೨೦೦೮-

೯ನೇ ಅವಧಿಯಲ್ಲಿ ಸುರಿದ ಬಾರಿ ಮಳೆಯಿಂದಾಗಿ ಉತ್ತರ ಕರ್ನಾಟಕದ ಜನತೆ ಜೀವ ಕೈಯಲ್ಲಿ ಹಿಡಿದು ಬದುಕುವಂತಾಯಿತು. ಲಕ್ಷಾಂತರ ಎಕರೆ ಪ್ರದೇಶದ ಬೆಳೆ ನಾಶವಾಯಿತು. ೩೦೦ಕ್ಕೂ ಹೆಚ್ಚು ಗ್ರಾಮಗಳು ಜಲಾವೃತಗೊಂಡವು. ೮೦೦ಕ್ಕೂ ಹೆಚ್ಚು ಜನ ಪ್ರಾಣ ಕಳೆದುಕೊಂಡರು, ಜಾನುವಾರುಗಳಿಗೆ ಲೋಕವೇ ಇಲ್ಲ. ಈ ರೀತಿಯ ಸಮಸ್ಯೆಗಳು ರೈತರನ್ನು ಕಾಡಿವೆ. ಭೂ ತಾಪಮಾನದ ಏರಿಕೆಯು ಈ ರೀತಿಯ ಬರಗಾಲಗಳು, ಅಕಾಲಿಕವಾಗಿ ಸುರಿಯುವ ಮಳೆ ಪ್ರವಾಹಗಳಿಗೆ ಕಾರಣ ಎನ್ನಬಹುದು. ಈ ಎಲ್ಲಾ ಕಾರಣಗಳು ರೈತರ ಕೃಷಿರಂಗದ ಮೇಲೆ ಬಾರಿ ಪರಿಣಾಮ ಬೀರಿದೆ.

## ಮುಂಗಡ ವ್ಯಾಪಾರ ಗುತ್ತಿಗೆ ಕೃಷಿ

ಈ ಹಿಂದಿನ ಬಿ.ಜೆ.ಪಿ. ನೇತೃತ್ವದ ಎನ್.ಡಿ.ಎ ಈಗಿನ ಯು.ಪಿ.ಎ ಸರ್ಕಾರಗಳು ಮುಂಗಡ ವ್ಯಾಪಾರಕ್ಕೆ ಅವಕಾಶ ನೀಡಿದ್ದು ಅದರ ದುಷ್ಪರಿಣಾಮಗಳನ್ನು ರೈತರು ಎದುರಿಸುತ್ತಿದ್ದಾರೆ.

ಪ್ರಸ್ತುತ ಅಗತ್ಯವಾದ ದಿನನಿತ್ಯ ಬಳಕೆಯ ವಸ್ತುಗಳ ಬೆಲೆಯು ಸಾಮಾನ್ಯ ಜನರ ಕೈಗೆಟುಕದೆ. ಆಕಾಶದೆತ್ತರಕ್ಕೆ ಏರಿವೆ. ಅರೆಹೊಟ್ಟೆಯಲ್ಲಿ ಬಡರೈತ ಕೂಲಿಕಾರರು ಬದುಕುತ್ತಿದ್ದಾರೆ. ಇನ್ನು ಮುಂಗಡ ವ್ಯಾಪಾರದಂತೆ ಬಹುರಾಷ್ಟ್ರೀಯ ಸಂಸ್ಥೆಗಳು ಬಿತ್ತುವ ಪೂರ್ವದಲ್ಲಿಯೇ ಬೆಳೆ ಖರೀದಿಸಲು ಮುಂದಾಗುತ್ತವೆ. ಬಹುರಾಷ್ಟ್ರೀಯ ಸಂಸ್ಥೆಗಳು ಅಂತರಾಷ್ಟ್ರೀಯ ಮಟ್ಟದಲ್ಲಿ ಮಾಡುವ ವ್ಯಾಪಾರಕ್ಕೆ ಬೇಕಾದ ಬೆಳೆಯನ್ನು ಗುತ್ತಿಗೆ ಕೃಷಿಯಲ್ಲಿ ಬೆಳೆಯಬೇಕಾಗುತ್ತದೆ. ಒಂದೆಡೆ ರೈತರು ತಮ್ಮ ಜಮೀನನ್ನು ಕಂಪನಿಗಳಿಗೆ ಬಿಟ್ಟುಕೊಟ್ಟು, ಸಾಲವನ್ನು ಮೈ ಮೇಲೆ ಎಳೆದುಕೊಂಡು ಅಗತ್ಯ ವಸ್ತುಗಳ ಬೆಲೆಯು ಇನ್ನೆಷ್ಟು ಏರಿಕೆಯ ಪರಿಸ್ಥಿತಿಗಳನ್ನು ಎದುರಿಸಬೇಕಾಗುತ್ತದೆ. ಈ ರೀತಿಯ ಪರಿಸ್ಥಿತಿಗಳು ರೈತರು ತಾವು ಬೆಳೆಯುವ ಬೆಳೆ ಮೇಲಿನ ಹಕ್ಕನ್ನು ಕಳೆದುಕೊಂಡು ಕಂಪನಿಗೆ ಗುಲಾಮರಾಗಬೇಕಾದ ಸಮಸ್ಯೆ ಬರುತ್ತದೆ.

## ವಿದ್ಯುತ್ ಸಮಸ್ಯೆ

ಪ್ರಸ್ತುತ ದಿನಗಳಲ್ಲಿ ವಿದ್ಯುತ್ ಸಮಸ್ಯೆಯು ಅಧಿಕವಾಗುತ್ತಿದೆ. ವಿದ್ಯುತ್ ಬಳಕೆದಾರ ರೈತರ ಸಂಖ್ಯೆ ಹೆಚ್ಚುತ್ತದೆ. ಲಕ್ಷಕ್ಕೆ ಹೆಚ್ಚಳಗೊಂಡಿದ್ದಾರೆ.[೪] ರಾಜ್ಯ ಸರ್ಕಾರದ ವಿದ್ಯುತ್ ನೀತಿಯು ರೈತರ ನಡುವೆ ಹಲವು ಸಮಸ್ಯೆಗಳನ್ನು ಹುಟ್ಟು ಹಾಕಿ ಆತಂಕಕ್ಕೀಡು ಮಾಡಿದೆ.

ವಿದ್ಯುತ್ ಉತ್ಪಾದನೆ ಹಾಗೂ ವಿತರಣೆಯನ್ನು ಖಾಸಗೀಕರಿಸುವ ನೀತಿಯಿಂದ ವಿದ್ಯುತ್ ಉತ್ಪಾದನೆಯಲ್ಲಿ "ದುಬಾರಿ ಬೆಲೆ ವಿದ್ಯುತ್" ನೀಡುವ ಖಾಸಗಿ ಉತ್ಪಾದಕರು ವ್ಯಾಪಕಗೊಂಡಿದ್ದಾರೆ. ಅದೇ ಸಂದರ್ಭದಲ್ಲಿ ಸಾರ್ವಜನಿಕ ವಿದ್ಯುತ್ ಉತ್ಪಾದನೆಗೆ ಅಗತ್ಯ ಹೂಡಿಕೆಗೆ ಸರ್ಕಾರ ಗಮನ ಹರಿಸುತ್ತಿಲ್ಲ. ಜನಸಂಖ್ಯೆ ಬೆಳವಣಿಗೆಗೆ ವಿದ್ಯುತ್ ಬೆಳವಣಿಗೆ ತೀವ್ರಗೊಳ್ಳುತ್ತಿದೆ. ಅದಕ್ಕನುಗುಣವಾಗಿ ಉತ್ಪಾದನೆ ಆಗುತ್ತಿಲ್ಲ. ಇಂಥ ಸಂದರ್ಭದಲ್ಲಿ ವಿತರಣೆಯನ್ನು ಖಾಸಗೀಕರಿಸುವ ಹುನ್ನಾರದಿಂದ ಕೆ.ಇ.ಬಿ.ಯನ್ನು ವಿಭಜಿಸಿ ಕೆ.ಪಿ.ಟಿ.ಸಿ.ಎಲ್ ಹಾಗೂ ಐದು ಎಸ್ಕಾಂ ರಚನೆ ಮಾಡಿದ್ದು ಮತ್ತು ಲಾಭ ಮಾಡುವ ಏರಿಯಾದಿಂದ ನಷ್ಟವಾಗುವ ಏರಿಯಾವನ್ನು ಸರಿಯಾಗಿಸುವ ನೀತಿಯನ್ನು ಕೈಬಿಟ್ಟು ಎದ್ದು

ಏಸ್ಕಾಂಗಳ ತಮಗಾಗುವ ನಷ್ಟವನ್ನು ಬೆಲೆ ಏರಿಕೆ ಮಾಡುವ ಮೂಲಕ ಸರಿದೂಗಿಸುವ ನೀತಿ ಜಾರಿಗೆ ತಂದಿರುವುದರಿಂದ ಇದು ಲಾಭ ಅಕ್ರಮವಾಗಿ ಬಳಸುವ ಲೂಟಿಕೋರ ಕೈಗಾರಿಕೆ ಮಾಲೀಕದಾರರೇ, ಗ್ರಾಹಕರಿಗೆ ಪಂಪ್‌ಸೆಟ್‌ದಾರರಿಗೆ ಹೊರೆಯಾಗಿದೆ.

ಪಂಪ್‌ಸೆಟ್‌ಗಳಲ್ಲಿ ಮೀಟರ್ ಅಳವಡಿಸಿಕೊಂಡು ನಿಗದಿತ ಬೆಲೆ ನೀಡಿ ಖಾಸಗೀಕರಿಸುವ ಸರ್ಕಾರದ ನೀತಿಗೆ ರೈತರು ಸಹಕರಿಸದೇ ಇರುವುದರಿಂದ ಖಾಯಂ ಲೋಡ್‌ಶೆಡ್ಡಿಂಗ್ ಜಾರಿಗೆ ತರಲಾಗಿದೆ. ಟ್ರಾನ್ಸ್‌ಫಾರ್ಮರ್ ಹಾಗೂ ಅಗತ್ಯ ಸಾಧನೆಗಳ ನೆರವು ನೀಡಲು ಹಿಂದೇಟು ಹಾಕಿ ಕಿರಿ ಕಿರಿ ನೀಡಲಾಗುತ್ತದೆ. ಇದೀಗ ನಿರಂತರ ಜ್ಯೋತಿ ಹೆಸರಿನಲ್ಲಿ ಕೃಷಿ ಪಂಪ್‌ಸೆಟ್ ವಿದ್ಯುತ್ ಲೈನ್‌ಗಳು ಮತ್ತು ಬೇರೆಲ್ಲಾ ಬಳಕೆಯ ವಿದ್ಯುತ್ ಲೈನ್‌ಗಳನ್ನು ಬೇರ್ಪಡಿಸಲಾಗುತ್ತಿದೆ. ಇದು ಬಿಲ್ ಪಾವತಿಸದ ಪಂಪ್‌ಸೆಟ್‌ಗಳಿಗೆ ವಿದ್ಯುತ್ ನಿರಾಕರಿಸುವ ಮತ್ತು ವಿದ್ಯುತ್ ಖಾಸಗೀಕರಿಸುವ ಯೋಜನೆಯ ಮಾರ್ಗವಾಗಿದೆ. ಪಂಪ್‌ಸೆಟ್‌ಗಳಿಗೆ ವಿದ್ಯುತ್ ಬೇಕೆಂದರೆ ಮೀಟರ್ ಅಳವಡಿಸಿಕೊಂಡು ಶುಲ್ಕ ಪಾವತಿಸುವಂತೆ ರೈತರನ್ನು ಬಲತ್ಕರಿಸಲು ಮತ್ತು ಬೇಕೆಂದಾಗ ಲೋಡ್‌ಶೆಡ್ಡಿಂಗ್ ಮಾಡಲು ಕೃಷಿ ಪಂಪ್‌ಸೆಟ್ ಲೈನನ್ನು ಪ್ರತ್ಯೇಕಿಸಲಾಗುತ್ತದೆ. ಈಗ ಅನಿವಾರ್ಯವಾಗಿ ಲೋಡ್ ಶೆಡ್ಡಿಂಗ್ ಮಾಡುವ ಮೂಲಕ ರೈತರನ್ನು ಗೋಳುಹೊಯ್ದುಕೊಳ್ಳಲಾಗುತ್ತದೆ ಹೊಸದಾಗಿ ಕನೆಕ್ಷನ್ ಮಾಡುವವರು ಕಡ್ಡಾಯವಾಗಿ ಮೀಟರ್ ಅಳವಡಿಸಲು ಸೂಚಿಸಿದೆ. ಹೀಗಾಗಿ ಷರತ್ತಿಗೆ ಒಪ್ಪದ ರೈತರಿಗೆ ಉಚಿತ ವಿದ್ಯುತ್ ಕನಸಾಗಿದೆ. ಹೀಗೆ ಗುಲ್ಬರ್ಗಾ ಜಿಲ್ಲೆಯನ್ನಲ್ಲದೆ. ಈ ವಿದ್ಯುತ್ ಸಮಸ್ಯೆ ಕರ್ನಾಟಕದ ರೈತರ ಸಮಸ್ಯೆಯಾಗಿದೆ.

## ಕೆಳಮಟ್ಟದ ಉತ್ಪಾದಕತೆ

ನೆಲ, ನೀರು, ಹಾಗೂ ಸೂರ್ಯನ ಬೆಳಕನ್ನು ಸಾಕಷ್ಟು ಪ್ರಮಾಣದಲ್ಲಿ ಹಾಗೂ ವ್ಯವಸ್ಥಿತವಾಗಿ ಬಳಸಿಕೊಳ್ಳದೆ ಇರುವುದು ಕೆಳಮಟ್ಟದ ಉತ್ಪಾದಕತೆಗೆ ಕಾರಣವಾಗಿದೆ. ಇದು ಭಾರತದ ಕೃಷಿಯ ಶಾಪವಾಗಿದೆ. ಭಾರತದ ಕೃಷಿಯಲ್ಲಿನ ಉತ್ಪಾದಕತೆ ಹೆಕ್ಟೇರಿಗೆ ಸರಾಸರಿ ಸುಮಾರು ೧.೬ಟನ್ ಆಗಿದೆ." ಇದು ಮುಂದುವರಿದ ದೇಶಗಳಷ್ಟೇ ಅಲ್ಲ ಚೀನಾ, ಇಂಡೋನೇಷಿಯಾ, ಬಾಂಗ್ಲಾ, ಮೇಕ್ಸಿಕೊ ಹಾಗೂ ಬ್ರಿಜಿಲ್‌ಗಳಂಥ ಅಭಿವೃದ್ಧಿ ಶೀಲ ದೇಶಗಳಲ್ಲಿರುವುದಕ್ಕಿಂತ ತೀರಾ ಕಡಿಮೆ ಆಗಿದೆ. ಉನ್ನತ ಕೃಷಿ ಬೆಳವಣಿಗೆ ದರ ಸಾಧಿಸಬೇಕಾದರೆ ಸರಾಸರಿ ಉತ್ಪಾದನೆ ಹೆಕ್ಟೇರಿಗೆ ೩.೫ಟನ್ ಅಥವಾ ಅದಕ್ಕೂ ಹೆಚ್ಚಾಗಿರಬೇಕು.

## ಮುಂಗಾರಿನ ಮೇಲೆ ಅವಲಂಬನೆ

ಭಾರತದ ಕೃಷಿಯು ಮಾನ್ಸೂನ್ ಮಳೆಯೊಡನೆ ಆಡುವ ಜೂಜಾಟವಾಗಿದೆ. ಮುಂಗಾರ ಮಳೆಯ ಮೇಲೆ ಅಧಿಕವಾಗಿ ಅವಲಂಬನೆಯಾಗಿದೆ. ಹಿಂಗಾರು ಬೆಳಗೆ ಕೆಲವೇ ಕೆಲವುಕಡೆ ಬಿತ್ತನೆ ಮಾಡಲಾಗುತ್ತದೆ. ಈ ಮುಂಗಾರ ಮಳೆಯು ಸರಿಯಾದ ಸಮಯಕ್ಕೆ ಬಂದರೆ ಮಾತ್ರ ಭಿತ್ತನೆ ಕಾರ್ಯ ಆಗುತ್ತದೆ. ಇಲ್ಲದಿದ್ದರೆ ಆ ವರ್ಷ ಪೂರ್ತಿ ಜಮೀನನ್ನು ಬೀಳು ಬಿಡಬೇಕಾದ ಸಂದರ್ಭ ಒದಗುತ್ತದೆ. ನೀರಾವರಿ

ವ್ಯವಸ್ಥೆಗಳ ನಿರ್ವಹಣೆಯೂ ಇದುವರೆಗೂ ಅಸಮರ್ಪಕವಾಗಿಯೇ ಇದೆ. ಸಣ್ಣ ಪುಟ್ಟ ನೀರಾವರಿಗಳಿಗೆ ಸರಕಾರದಿಂದ ಸಿಗುವ ಉತ್ತೇಜನ ತೃಪ್ತಿಕರವಾಗಿಲ್ಲ. ಆದುದರಿಂದ ರೈತರು ಮಳೆಯನ್ನೇ ನಂಬಿ ಕೃಷಿಕಾರ್ಯದಲ್ಲಿ ತೊಡಗಬೇಕಾಗುತ್ತದೆ. ಮುಂಗಾರು ಮಳೆಯು ರೈತನಿಗೆ ಆಪ್ತರಕ್ಷಕನಿದ್ದಂತೆ. ಒಂದು ವೇಳೆ ಮುಂಗಾರು ಮಳೆ ಕೈಕೊಟ್ಟರೆ ಆ ವರ್ಷ ಪೂರ್ತಿ ರೈತ ಸಾಲದಲ್ಲಿ ಸಾಯಬೇಕಾಗುತ್ತದೆ. ಹೊಟ್ಟೆ ಹೊರೆಯಲು ಪಟ್ಟಣಗಳ ಕಡೆ ಗುಳೆ ಹೋಗಬೇಕಾಗುತ್ತದೆ. ಸಾಕಿರುವ ಜಾನುವಾರುಗಳನ್ನು ಸಿಕ್ಕಷ್ಟು ಬೆಲೆಗೆ ಮಾರಾಟ ಮಾಡಬೇಕಾಗುತ್ತದೆ. ಈ ರೀತಿಯ ಪರಿಸ್ಥಿತಿಗಳನ್ನು ರೈತರು ಹೆದರಿಸಬೇಕಾಗಿದೆ.

### ಕೃಷಿ ಉತ್ಪನ್ನಗಳ ರಫ್ತು

೧೯೯೧ ಜುಲೈನಿಂದ ಹೊಸ ಆರ್ಥಿಕ ನೀತಿಯನ್ನು ಜಾರಿಗೆ ತಂದಿರುವುದು ೧೯೯೫ ಜನವರಿಯಿಂದ 'ವಿಶ್ವವ್ಯಾಪಾರ ಸಂಸ್ಥೆ' ಅಸ್ತಿತ್ವಕೆ ಬಂದಿರುವುದು. ದೇಶದ ಕೃಷಿ ವಿಭಾಗದಲ್ಲಿ ದೂರವ್ಯಾಪಿ ಪರಿಣಾಮಗಳನ್ನು ಕುರಿತಂತೆ ಸಂಪೂರ್ಣವಾಗಿ ಹೊಸತಾದ ಪರಿಸ್ಥಿತಿಯನ್ನು ಉಂಟು ಮಾಡಿದೆ.

ಹೊಸ ಆರ್ಥಿಕ ನೀತಿಗೆ ಅನುಗುಣವಾಗಿ ಆಂತರಿಕ ಹಾಗೂ ಬಾಹ್ಯವ್ಯಾಪಾರವನ್ನು ಉದಾರೀಕರಿಸಲಾಗಿದೆ. ಕೃಷಿ ವ್ಯಾಪಾರವನ್ನು ಜಾಗತೀಕರಿಸಲು ಹಲವಾರು ಕ್ರಮಗಳನ್ನು ಕೈಗೊಳ್ಳಲಾಗಿದೆ. ವ್ಯಾಪಾರದಲ್ಲಿ ಆಯಾತ, ನಿರ್ಯಾತಗಳ ನಡುವಿನ ಅಂತರವನ್ನು ಕಡಿಮೆ ಮಾಡಲು ಮತ್ತು ಈ ಅಂತರವನ್ನು ಕೊನೆಯದಾಗಿ ಸಂಪೂರ್ಣವಾಗಿ ಇಲ್ಲದಂತೆ ಮಾಡಲು ೧೯೯೧ ರಿಂದ ಸರಕಾರ ರಫ್ತನ್ನು ಗಣನೀಯವಾಗಿ ಹೆಚ್ಚಿಸುವ ನೀತಿಯನ್ನು ಅನುಸರಿಸುತ್ತದೆ. ಇದು ಸರಿಯಾದುದೇ ಮತ್ತು ನಮ್ಮ ದೇಶಕ್ಕೆ ಒಳಿತಾದುದೆ. ಆದರೆ ಈ ರಫ್ತು ಮಾಡು ನೀತಿಯನ್ನು ಸರಿಯಾಗಿ ನಿರ್ವಹಿಸಬೇಕು.[೬]

### ಬೀಜ ಕೈಗಾರಿಕೆ ಹಾಗೂ ಬಹುರಾಷ್ಟ್ರೀಯ ಕಂಪನಿಗಳು

ಬಹು ರಾಷ್ಟ್ರೀಯ ಕಂಪನಿಗಳಿಗೆ ಹೆಚ್ಚಿನ ಆಸಕ್ತಿಯ ಕ್ಷೇತ್ರವೆಂದರೆ ಜೈವಿಕ ತಾಂತ್ರಿಕ ಕ್ಷೇತ್ರ ಕಾರಣ ತಂತ್ರಗಳನ್ನು ಉಪಯೋಗಿಸಿಕೊಂಡ ಮಿಶ್ರತಳಿ ಅಥವಾ ಉನ್ನತ ಫಲದಾಯಕ ಬೀಜಗಳನ್ನು ಸಿದ್ಧಗೊಳಿಸುತ್ತಿರುವುದು, ಸಸ್ಯಗಳನ್ನು ಗುಣೀಕರಿಸುತ್ತಿರುವುದು ಮತ್ತು ಸಸ್ಯಗಳು ಪೌಷ್ಠಿಕಾಂಶಗಳನ್ನು ಗೊತ್ತು ಪಡಿಸುವ ಸೂಕ್ಷ್ಮ ಜೀವಿಗಳನ್ನು ತಯಾರಿಸುತ್ತಿರುವುದು. ಪುಷ್ಪ ಕೃಷಿ ತೋಟಗಾರಿಕೆ ಹಾಗೂ ಸಂಸ್ಕರಣ ಸಂಬಂಧವುಳ್ಳ ಜಲಕೃಷಿ ಇವು ಈ ಬಹುರಾಷ್ಟ್ರೀಯ ಕಂಪನಿಯ ಆಸಕ್ತಿಯ ವಲಯಗಳು ಬೀಜ ಕೈಗಾರಿಕೆ ಹಾಗೂ ಕೃಷಿ ಜೈವಿಕ ತಾಂತ್ರಿಕ ವಿಭಾಗಗಳಲ್ಲಿ ಬಹುರಾಷ್ಟ್ರೀಯ ಕಂಪನಿಗಳಿಗೆ ಮಹದಾಸಕ್ತಿ ಭಾರತೀಯ ರೈತರು ಪ್ರತಿವರ್ಷವೂ ಸುಮಾರು ೨ ಮೀಲಿಯನ್ ಅಮೇರಿಕನ್ ಡಾಲರಗಳ ಮೌಲ್ಯದ ಬೀಜಗಳನ್ನು ಬಳಸುತ್ತಿದ್ದಾರೆಂದು ಅಂದಾಜು ಮಾಡಲಾಗಿದೆ.[೭] ಬಹುರಾಷ್ಟ್ರೀಯ ಕಂಪನಿಗಳಿಂದ ಪ್ರತಿವರ್ಷವು ಆದರಿಂದಲೇ ಬೀಜ ಖರೀದಿಸಬೇಕು ಈ ರೀತಿಯ ಒಪ್ಪಂದಗಳು ಸಣ್ಣ ರೈತರನ್ನು ಸಂಕಷ್ಟಕ್ಕೀಡು ಮಾಡಿದೆ. ಅವರು ಹೇಳುವ ಬೆಲೆಗೆ ಕೊಂಡುಕೊಳ್ಳಬೇಕು. ಬೇರೆ ಬೀಜಗಳನ್ನು ಬಳಸಿದರೆ ಇಳುವರಿ ಕಡಿಮೆ ಆಗುವುದೆಂಬ ಭಯದಿಂದ ರೈತರು ಅವರು ಹೇಳುವ ಬೆಲೆಗೆ ಅವರ ಕಂಪನಿಯಿಂದ ಬೀಜಗಳನ್ನು ಬಳಸುತ್ತಾರೆ.

### ಕನಿಷ್ಠ ಬೆಂಬಲ ಬೆಲೆ ನಿರ್ಧಾರದ ಸಮಸ್ಯೆಗಳು

ಕನಿಷ್ಠ ಬೆಂಬಲ ಬೆಲೆ ನಿರ್ಧರಿಸಲು ಉತ್ಪಾದನಾ ವೆಚ್ಚವೊಂದೇ ಆಧಾರವೇನೆ ಅಲ್ಲ. ಆದರೂ ಉತ್ಪಾದನಾ ವೆಚ್ಚ ನಿರ್ಧರಿಸುವಾಗ ಕೃಷಿ ಕ್ಷೇತ್ರದ ಲಾಭದಾಯಕತೆ ಸಂಪನ್ಮೂಲಗಳ ಬಳಕೆಯಲ್ಲಿ ದಕ್ಷತೆ, ಉತ್ಪನ್ನಗಳ ಮಾರಾಟ ಬೆಲೆ ಇತ್ಯಾದಿ ಕೃಷಿ ಕ್ಷೇತ್ರದ ಆರ್ಥಿಕತೆಯ ಹಲವಾರು ಅಂಶಗಳನನು ಸಾಮಾನ್ಯವಾಗಿ ಚರ್ಚಿಸಲಾಗುವುದರಿಂದ ಕನಿಷ್ಠ ಬೆಂಬಲ ಬೆಲೆಯ ಮಟ್ಟ ಸಹಜವಾಗಿಯೇ ವೆಚ್ಚದ ಮೇಲೆ ಆಧರಿಸುತ್ತದೆ. ಸರ್ಕಾರವು ಕನಿಷ್ಠ ಬೆಂಬಲ ಬೆಲೆ ನಿಗದಿ ಮಾಡುವಾಗ ಈ ಯಾವ ಮಾನದಂಡಗಳನ್ನು ಅನುಸರಿಸುವುದಿಲ್ಲ. ರೈತರು ಬೆಳೆದ ಬೆಳೆಗೆ ಸರಿಯಾದ ಬೆಲೆಯನ್ನು ನಿಗದಿ ಮಾಡದೆ ಬೇಕಾಬಿಟ್ಟಿಯಾಗಿ ನಿಗದಿ ಮಾಡಿ ರೈತರು ಬೀದಿಗಳಿದು ಪ್ರತಿಭಟನೆ ಮಾಡುವಂತೆ ಮಾಡುತ್ತಾರೆ. ತಾವು ಬೆಳೆದ ಬೆಳೆಗೆ ಸರಿಯಾದ ಬೆಲೆ ನಿರ್ಧರಿಸದೆ ಇರುವುದರಿಂದ ರೈತರು ಅನಿವಾರ್ಯವಾಗಿ ಬೇರೆ ಬೆಳೆ ಬೆಳೆಯಲು ಮುಂದಾಗುತ್ತಾರೆ. ಇಲ್ಲದೆ ರೈತ ಮಾಡಿದ ಸಾಲ ತೀರಿಸಲಾಗದೆ ಆತ್ಮಹತ್ಯೆಗೆ ಶರಣಾಗುತ್ತಾನೆ.[೮] ಆದ್ದರಿಂದ ರೈತರು ಬೆಳೆದ ಬೆಲೆಗೆ ಸರಿಯಾದ ಮಾನದಂಡವನ್ನು ಉಪಯೋಗಿಸಿ ಬೆಂಬಲ ಬೆಲೆ ನಿಗದಿ ಮಾಡಬೇಕು. ಈ ಬೆಲೆ ನಿಗದಿ ಮಾನದಂಡಗಳ ರೈತರನ್ನು ಸಂಕಷ್ಟಕ್ಕೀಡು ಮಾಡಿವೆ.

### ಸಂಗ್ರಹಣೆಯ ಸಮಸ್ಯೆ

ರೈತರಿಗೆ ತಾವು ಬೆಳೆದ ಬೆಳೆಗಳಿಗೆ ಗೋದಾಮುಗಳ ಸಮಸ್ಯೆ ಎದುರಾಗುತ್ತದೆ. ಹೂ, ಹಣ್ಣು, ತರಕಾರಿ ಈ ರೀತಿಯ ಬೆಳೆಗಳಿಗೆ ಒಂದು ಅಥವಾ ಎರಡು ದಿನದಲ್ಲಿ ಮಾರಾಟ ಮಾಡಬೇಕು ಇಲ್ಲದಿದ್ದರೆ ಅವು ಹಾಳಾಗುತ್ತವೆ. ಇವುಗಳಿಗೆ ತಂತ್ರಜ್ಞಾನದಿಂದ ಶೇಖರಿಸುವ ವ್ಯವಸ್ಥೆ ಮಾಡಬೇಕು. ಈ ಸಮಸ್ಯೆಯು ಪ್ರತಿಯೊಬ್ಬ ರೈತರ ಸಮಸ್ಯೆಯಾಗಿದೆ. ಅದೇ ರೀತಿ ಕಾಳುಗಳಿಗೂ ಸಹ ಸಮಸ್ಯೆ ಇದೆ. ಅಂದರೆ ಇಲಿ, ಹೆಗ್ಗಣ ಇವುಗಳ ಸಮಸ್ಯೆ ತಾವು ಬೆಳೆದ ಬೆಳೆಗಳಿಗೆ ಒಳ್ಳೆಯ ಬೆಲೆ ಬರುವರೆಗೂ ಶೇಖರಿಸಿಡಬೇಕು ಇಲ್ಲದಿದ್ದರೆ ಕಡಿಮೆ ಬೆಲೆಗೆ ಮಾರಬೇಕಾಗುತ್ತದೆ. ಶೇಖರಿಸಿಡಬೇಕು ಎಂದರೆ ದಾಸ್ತಾನು ಮಳಿಗೆಗಳ ಸಮಸ್ಯೆ ಇರುವ ಗೋದಾಮುಗಳಲ್ಲಿ ಇಲಿ ಹೆಗ್ಗಣಗಳ ಕಾಟ ಈ ಸಮಸ್ಯೆಗಳು ಪ್ರತಿಯೊಬ್ಬ ರೈತರ ಸಮಸ್ಯೆಯಾಗಿದೆ. ಈ ಎಲ್ಲಾ ಸಮಸ್ಯೆಗಳಿಗೆ ಹೂ, ಹಣ್ಣು, ತರಕಾರಿಗಳನ್ನು ಶೇಖರಿಸಿಡಲು ವೈಜ್ಞಾನಿಕ ವ್ಯವಸ್ಥೆ ಕಾಳುಗಳನ್ನು ಶೇಖರಿಸಿಡಲು ಆಧುನಿಕ ಗೋದಾಮುಗಳನ್ನು ನಿರ್ಮಿಸಿದರೆ ರೈತರು ಒಳ್ಳೆಯ ಬೆಲೆ ಬರುವವರೆಗೂ ಕಾದು ಮಾರಾಟ ಮಾಡಬಹುದು.

### ಸಾರಿಗೆಯ ಸಮಸ್ಯೆ

ಸಾರಿಗೆಯ ಸಮಸ್ಯೆಯನ್ನು ಪ್ರತಿಯೊಬ್ಬ ಗ್ರಾಮೀಣ ಭಾಗದ ರೈತರು ಎದುರಿಸುತ್ತಿದ್ದಾರೆ. ಸಾರಿಗೆ ಇಲ್ಲದೆ ನಾವು ಬೆಳೆದ ಬೆಳೆಯನ್ನು ಊರಿನಲ್ಲೇ ದಲ್ಲಾಳಿಗಳಿಗೆ ಅವರು ಕೇಳಿದ ಬೆಲೆಗೆ ಕೊಡುತ್ತಾರೆ. ತಾವು ಬೆಳೆದ ಬೆಳೆಯನ್ನು ಮಾರುಕಟ್ಟೆಗೆ ಸಾಗಿಸಲು ವಾಹನದ ಸಮಸ್ಯೆ ರಸ್ತೆಯ ಸಮಸ್ಯೆಗಳು ತುಂಬಾ ಇವೆ. ಇರುವ ರಸ್ತೆಗಳಲ್ಲೇ ಸಾಗಿಸಬೇಕಾದರೆ ರಸ್ತೆಯಲ್ಲೆಲ್ಲ ಸೋರಿ ಹಾಳಾಗುತ್ತದೆ. ಒಳ್ಳೆಯ ಸಾರಿಗೆ ಸಂಪರ್ಕ ಕಲ್ಪಿಸಿದರೆ ಮಾರುಕಟ್ಟೆಗೆ ತಂದು ಮಾರಾಟ ಮಾಡಿ ಒಳ್ಳೆಯ ಬೆಲೆಯನ್ನು ಪಡೆದುಕೊಳ್ಳಬಹುದು.

**ಮಧ್ಯವರ್ತಿಗಳ ಸಮಸ್ಯೆ**

ಪ್ರಸ್ತುತ ರೈತರ ಸಮಸ್ಯೆಗಳಲ್ಲಿ ಇದೊಂದು ದೊಡ್ಡ ಸಮಸ್ಯೆಯಾಗಿದೆ. ಬೆಳೆ ಬೆಳೆದ ರೈತರಿಗಿಂತ ಮಧ್ಯವರ್ತಿಗಳು ಹೆಚ್ಚು ಲಾಭವನ್ನು ಪಡೆದುಕೊಳ್ಳುತ್ತಿದ್ದಾರೆ. ಬಿತ್ತನೆ ಸಂದರ್ಭದಲ್ಲಿ ಬೀಜಗೊಬ್ಬರಗಳಿಗೆ ಸಾಲ ಕೊಡಿಸಿ ಸಾಲಕ್ಕೆ ಅಧಿಕ ಬಡ್ಡಿಹಾಕಿ ಬೆಳೆ ಬಂದಾಗ ಅವರಿಗೆ ಕೊಡಬೇಕು ಅದು ಅವರು ಕೇಳಿದ ಬೆಲೆಗೆ ಸುಗ್ಗಿಯ ಕಾಲದಲ್ಲಿ ಗ್ರಾಮಗಳಿಗೆ ಬಂದು ಅಲ್ಲಿಯೇ ವ್ಯಾಪಾರ ಮಾಡುತ್ತಾರೆ. ಅವರಿಗೆ ಕಮಿಷನ್ ಕೊಡಬೇಕು. ಬಡರೈತರಿಗೆ ಮಾರುಕಟ್ಟೆ ಬೆಲೆ ಗೊತ್ತಾಗದೆ ಅವರು ಹೇಳಿದ ಬೆಲೆಗೆ ಅಲ್ಲಿಯೇ ಕೊಟ್ಟು ನಷ್ಟವನ್ನು ಅನುಭವಿಸುತ್ತಾರೆ. ರೈತರಿಗಿಂತ ದಲ್ಲಾಳಿಗಲೇ ಹೆಚ್ಚು ಲಾಭವನ್ನು ಪಡೆಯುತ್ತಾರೆ.

**ಸಂಪರ್ಕದ ಸಮಸ್ಯೆ**

ಗ್ರಾಮಗಳಲ್ಲಿರುವ ರೈತರಿಗೆ ದಿನಪತ್ರಿಕೆ ಮಾಧ್ಯಮದ ಕೊರತೆಗಳನ್ನು ಎದುರಿಸುತ್ತಿವೆ. ಅಂದರೆ ಮಾರುಕಟ್ಟೆಯಲ್ಲಿ ಯಾವ ಬೆಳೆಗೆ ಯಾವ ಬೆಲೆ ಇದೆ ಎಂಬುದು ರೈತರಿಗೆ ಗೊತ್ತಾಗುವುದಿಲ್ಲ. ಹಾಗಾಗಿ ದಲ್ಲಾಳಿಗಳು ಊರಿಗೆ ಬಂದಾಗ ಅವರು ಕೇಳಿದ ಬೆಲೆಗೆ ಕೊಟ್ಟು ನಷ್ಟ ಅನುಭವಿಸುತ್ತಾರೆ. ಈ ಸಮಸ್ಯೆಗಳ ಅನಕ್ಷರತೆ ಹೊಂದಿದ ರೈತರ ಸಮಸ್ಯೆಯಾಗಿದೆ.

**ತೂಕದ ಸಮಸ್ಯೆ**

ಮಾರುಕಟ್ಟೆಯಲ್ಲಿ ರೈತರಿಗೆ ತೂಕದ ಸಮಸ್ಯೆ ಎದುರಾಗುತ್ತದೆ. ಅಂದರೆ ಅಲ್ಲಿ ಆಧುನಿಕ ಯಂತ್ರಗಳಿಂದ ತೂಕ ಮಾಡುವುದು. ಬಿಟ್ಟು ಹಳೆಯ ವಿಧಾನದ ತೂಕ ಮಾಡುತ್ತಾರೆ. ಮತ್ತು ಅಂಗಡಿಯ ಮಾಲಿಕ ಹೇಳಿದ ಹಾಗೆ ಕೆಲಸಗಾರರು ತೂಕ ಮಾಡುತ್ತಾರೆ. ಅಂದರೆ ಊರಿನಲ್ಲಿ ಒಂದು ತೂಕ ಬಂದರೆ ಮಾರುಕಟ್ಟೆಗೆ ತೆಗೆದುಕೊಂಡು ಹೋದಾಗ ಒಂದು ತೂಕ ಬರುತ್ತದೆ. ಮಾರುಕಟ್ಟೆಗಳಲ್ಲಿ ಹಾಗೂ ಗ್ರಾಮದಲ್ಲಿ ಬರುವ ದಲ್ಲಾಳಿಗಳು ರೈತರಿಗೆ ತೂಕದಲ್ಲಿ ಹೆಚ್ಚಾಗಿ ವಂಚನೆಗೊಳಿಸುತ್ತಿದ್ದಾರೆ. ಈ ಸಮಸ್ಯೆಯು ಪ್ರತಿಯೊಬ್ಬ ರೈತರ ಸಮಸ್ಯೆಯಾಗಿದೆ. ಇಂಥ ಮೋಸದ ತೂಕವನ್ನು ತೆಗೆದು ಹಾಕಿ ಹೊಸ ರೀತಿಯ ಕಂಪ್ಯೂಟರ್ ತೂಕವನ್ನು ಎಲ್ಲ ಕೃಷಿ ಮಾರುಕಟ್ಟೆಯಲ್ಲಿ ಅಳವಡಿಸಿಕೊಳ್ಳಬೇಕು ಮತ್ತು ಕೃಷಿ ಸಮಿತಿಯ ಅಧಿಕಾರಿಗಳು ಇದನ್ನು ಸರಿಯಾಗಿ ತಪಾಸಣೆ ಮಾಡಿ ತಪ್ಪಿತಸ್ಥರ ವಿರುದ್ಧ ಕಠಿಣ ಕ್ರಮ ಜರುಗಿಸಬೇಕು ಅಂದಾಗ ಮಾತ್ರ ಕೃಷಿ ಮಾರುಕಟ್ಟೆಯಲ್ಲಿನ ದೋಷ ಮುಕ್ತಿ ಮಾಡಬಹುದು ಇದರಿಂದ ರೈತರ ಸಮಸ್ಯೆ ನಿವಾರಿಸಬಹುದು.

**ಬೆಂಬಲ ಬೆಲೆ ನಿರ್ಧಾರದ ಸಮಸ್ಯೆ**

ರೈತರು ತಾವು ಬೆಳೆದ ಧಾನ್ಯಗಳಿಗೆ ಬೆಂಬಲ ಬೆಲೆ ನಿಗದಿ ಮಾಡುವಲ್ಲಿ ಅನೇಕ ಸಮಸ್ಯೆಗಳಿವೆ. ಅವುಗಳನ್ನು ಸರಿಯಾಗಿ ಬೆಲೆ ನಿರ್ಧಾರ ಮಾಡುವಲ್ಲಿ ಕ್ರಮ ಕೈಗೊಳ್ಳಬೇಕು ಅಂದರೆ ಬೆಲೆ ನಿರ್ಧಾರಕ್ಕೆ ರೈತ ವರ್ಷದ ಎಲ್ಲಾ ೧೨ ತಿಂಗಳು ಕಾರ್ಯತತ್ಪರನಾಗಿ ಇರುವುದಿಲ್ಲ. ಆದ್ದರಿಂದ ಅವನ ವಿಶ್ರಾಂತಿ

ಅವಧಿಯನ್ನು ವೇತನ ರಹಿತ ಅವಧಿಯೆಂದು ಪರಿಗಣಿಸಬೇಕು. ಆ ಅವಧಿಗೆ ಲೆಕ್ಕಾಚಾರ ಮಾಡಿ ಆ ಮೊತ್ತವನ್ನು ಕೃಷಿ ಸರಕುಗಳ ಉತ್ಪಾನಾ ವೆಚ್ಚಕ್ಕೆ ಸೇರಿಸಿ ಹಾಗೆಯೇ ವೈಜ್ಞಾನಿಕ ಬೆಲೆ ಸರಿಹೊಂದುವ ಅನುಬೋಗಿ ಸರಕು ಬೆಲೆ ಸೂಚ್ಯಾಂಕವಿಲ್ಲದೆ ಸಾಧ್ಯವಿಲ್ಲ ಮತ್ತು ಅದೇ ವೇಳೆಗೆ ಕೃಷಿ ಮತ್ತು ಕೈಗಾರಿಕಾ ಸರಕುಗಳ ಬೆಲೆ ಸಮಾನತೆ ಸಾಧಿಸಲು ಉತ್ಪಾದನಾ ವೆಚ್ಚವನ್ನು ಕಂಡು ಹಿಡಿಯಲು ಒಂದು ನಿರ್ಧಿಷ್ಟ ವಿಧಾನ ಇರಬೇಕು.[៩] ಈ ರೀತಿಯ ಬೆಂಬಲ ಬೆಲೆ ನಿರ್ಧಾರದ ಸಮಸ್ಯೆಯನ್ನು ಸೂಕ್ಷ್ಮವಾಗಿ ಪರಿಶೀಲಿಸಿ ನಿರ್ಧಾರ ಕೈಗೊಳ್ಳಬೇಕು.

## ಕ್ರಮಗಳು

ರೈತರ ಹಿತ ದೃಷ್ಟಿಯಿಂದ ಸರ್ಕಾರವು ಕೆಳಗಿನ ಕ್ರಮಗಳನ್ನು ಕೈಗೊಂಡರೆ ರೈತರೂ ಸಹ ಈ ಸಮಾಜದಲ್ಲಿ ಒಂದು ಮೌಲ್ಯಯುತ ಜೀವನವನ್ನು ನಡೆಸಬಹುದು ಎಂದು ಕೆಲವೊಂದು ಕ್ರಮಗಳನ್ನು ಹೇಳಲಾಗಿದೆ. ಇದರಿಂದ ರೈತರ ಸಮಸ್ಯೆಯನ್ನು ಹಾಗೂ ರೈತರ ಆತ್ಮಹತ್ಯೆ ತಡೆಯುವಲ್ಲಿ ಮತ್ತು ರೈತರ ಅಭಿವೃದ್ಧಿಯ ಮೂಲಕ ದೇಶದ ಪ್ರಗತಿಯನ್ನು ಉನ್ನತ ಮಟ್ಟಕ್ಕೆ ಹೋಗಬಹುದು.

ಬ್ಯಾಂಕ್ ಮತ್ತು ಸಹಕಾರಿ ಸಂಸ್ಥೆಗಳಲ್ಲಿರುವ ಸಾಲಗಳ ರದ್ಧತಿಯಾಗಬೇಕು ಮತ್ತು ಮಧ್ಯವರ್ತಿಗಳಿಲ್ಲದೆ ಶೇಕಡ ೪ರ ಬಡ್ಡಿದರದಲ್ಲಿ ಸಾಲ ಬಿಡುಗಡೆ ಮಾಡುವುದು ಮತ್ತು ಸಾಲದ ಮೇಲಿನ ಚಕ್ರ ಬಡ್ಡಿಯನ್ನು ನಿಷೇಧಿಸಬೇಕು.

ಕೃಷಿ ಯೋಜನೆಗಳನ್ನು ಪರಿಗಣಿಸಿ ಸರಿಯಾದ ರೀತಿಯಲ್ಲಿ ರೈತರಿಗೆ ಸಹಾಯ ನೀಡುವಂತೆ ಕ್ರಮಗಳು ಜರುಗಿಸಬೇಕು.

ಕೃಷಿ ವೆಚ್ಚಗಳನ್ನು ಪರಿಗಣಿಸಿ ಸಾಲ ನೀಡುವಿಕೆಯನ್ನು ಹೆಚ್ಚಿಸಬೇಕು.

ಉತ್ಪಾದನಾ ಆಧಾರದ ಮೇಲೆ ತೆರಿಗೆ, ಅಭಿವೃದ್ಧಿ, ತೆರಿಗೆ ರದ್ಧತಿ, ನೀರಿನ ಕಂದಾಯವನ್ನು ಕಡಿಮೆ ಮಾಡಬೇಕು.

ನೀರಾವರಿ ರಹಿತ ಭೂಮಿಗೆ ತೆರಿಗೆ ಹಾಕಬಾರದು. ಇಂಥ ಭೂಮಿಗೆ ಹಲವಾರು ಹೊಸ ಹೊಸ ಯೋಜನೆ ಜಾರಿಗೆ ಮಾಡಬೇಕು.

ಮಾನವ ದಿನದ ಆಧಾರದ ಮೇಲೆ ವೈಜ್ಞಾನಿಕ ಬೆಲೆ ನೀತಿಯನ್ನು ಜಾರಿಗೊಳ್ಳಿಸಬೇಕು.

ಪ್ರತಿಯೊಬ್ಬ ರೈತ ಮತ್ತು ಕೃಷಿ ಕಾರ್ಮಿಕರಿಗೆ ನಿವೃತ್ತಿ ವೇತನ ಕೊಡಬೇಕು.

ಕೃಷಿ ಕಾರ್ಮಿಕರಿಗೆ ಕೈಗಾರಿಕಾ ಕಾರ್ಮಿಕರಿಗೆ ನೀಡುವ ವೇತನವನ್ನು ನೀಡಬೇಕು.

ಬೆಳೆ ಹಾನಿ ಮತ್ತು ಬರಗಾಲ ಹಾಗೂ ನೆರೆಹಾವಳಿಯಿಂದ ಹಾನಿಯಾದ ರೈತರ ಬೆಳೆಗಳಿಗೆ ವಿಮಾ ಸೌಲಭ್ಯ ಬೇಗನೆ ಕಲ್ಪಿಸಬೇಕು.

ರೈತರ ಟ್ರ್ಯಾಕ್ಟರ್‌ಗಳ ಮೇಲೆ ವಿಧಿಸುವ ಎಲ್ಲ ವಿಧದ ತೆರಿಗೆ ಮತ್ತು ಸುಂಕಗಳನ್ನು ಹಾಗೂ ಇತರ ನಿರ್ಬಂಧಗಳನ್ನು ತೆಗೆದು ಹಾಕಬೇಕು.

ಗ್ರಾಮೀಣ ರಸ್ತೆಗಳನ್ನು ಸಂಚಾರಕ್ಕೆ ಯೋಗ್ಯವನ್ನಾಗಿ ಮಾಡಬೇಕು.

ನಮ್ಮ ಕೃಷಿ ರಫ್ತುಗಳನ್ನು ನಿರಂತರವಾಗಿ ಹೆಚ್ಚಿಸಬೇಕಾದಲ್ಲಿ ಮೊದಲು ಪೂರ್ವಾವಶ್ಯಕತೆ ಎಂದರೆ ಉತ್ಪನ್ನ, ಬೆಳವಣಿಗೆ ದರ ಹಾಗೂ ದೃಢ ಉತ್ಪಾದನಾ ನೆಲೆಗಳ ಸಾಧನೆ ಮಾಡಬೇಕು.

ಕೃಷಿಯ ಮೇಲಿನ ಸಾರ್ವಜನಿಕ ಬಂಡವಾಳ ಹೂಡಿಕೆ ಹೆಚ್ಚಿರಬೇಕು.

ಸಂಶೋಧನೆ ಹಾಗೂ ಬೆಳವಣಿಗೆ ಅದರಲ್ಲೂ ವಿಶೇಷವಾಗಿ ಜೈವಿಕ ತಾಂತ್ರಿಕತೆ ವಿಜ್ಞಾನಗಳಲ್ಲಿ ಸಂಶೋಧನೆಗೆ ಹೆಚ್ಚಿನ ಪ್ರಾಮುಖ್ಯತೆ ನೀಡಬೇಕು.

ನೀರಾವರಿ, ಸಂಪರ್ಕಸಾರಿಗೆ, ವಿದ್ಯುತ್ ಸೌಲಭ್ಯ ಅಲ್ಪವೆಚ್ಚದ ಸರಬರಾಜು ಇತ್ಯಾದಿಗಳ ನಿರ್ಮಾಣದಲ್ಲಿ ಅಭಿವೃದ್ಧಿ ಆಗಬೇಕು.

ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ಸೂಕ್ತ ಕ್ರಮ ಕೈಗೊಂಡು ಉತ್ಪಾದನೆಯನ್ನು ಸಮರ್ಥವಾಗಿ ಸಂಘಟಿಸಿ ಕೃಷಿ ರಫ್ತನ್ನು ಹೆಚ್ಚಿಸಬೇಕು.

ಸರಕುಗಳ ರಫ್ತನ್ನು ಹೆಚ್ಚಿಸಿಕೊಳ್ಳುವವರ ಮತ್ತು ಮಾರಾಟಗಾರರ ಮಧ್ಯ ಸರಕು ವಿನಿಮಯಕ್ಕೆ ಹಾಗೂ ಮುಮ್ಮಾರಿಕೆಯ ಸರಕುಗಳ ಸಾಲ ಪತ್ರಗಳ ಆಯ್ಕೆ ಒಪ್ಪಂದಗಳ ಬಳಕೆಗೆ ಉತ್ತೇಜನ ನೀಡುವುದು ಅವಶ್ಯಕವಾಗಿದೆ.

ಅಂತರಾಷ್ಟ್ರೀಯ ಸರಕು ಬೆಲೆಗಳ ನಿರ್ಧಾರ ಮಾಡಬೇಕಾದಲ್ಲಿ ಬೆಲೆ ರೂಪಿಸುವ ವಿಧಾನ ಹೆಚ್ಚು ದಕ್ಷವೂ ಪಾರದಶಕವೂ ಆಗಿರಬೇಕು.

ಸರಕಾರವು ಸರಕು ವಿನಿಮಯಗಳನ್ನು ಜಾರಿಗೆ ತಂದು ಅದರ ವ್ಯೂಹ ರಚನೆಗಳನ್ನು ಜನಪ್ರಿಯಗೊಳಿಸಬೇಕು.

ಕೃಷಿ ಬೆಲೆಗಳು ಉತ್ಪಾದನಾ ವೆಚ್ಚದ ಮೇಲೆ ನಿರ್ಧಾರಿತವಾಗಬೇಕು.

ಗೊಬ್ಬರ, ಕೃಷಿ ಉಪಕರಣಗಳ ಮೇಲಿನ ಬೆಲೆಗಳು ರೈತರ ಅನುಕೂಲಕ್ಕೆ ತಕ್ಕಂತೆ ಇಡಬೇಕು.

ರೈತರ ಫಲವತ್ತಾದ ಭೂಮಿಯನ್ನು ಸರ್ಕಾರವು ಆಕ್ರಮಿಸಿಕೊಳ್ಳುವುದನ್ನು ನಿಲ್ಲಿಸಬೇಕು.

ಕೃಷಿ ಕಾರ್ಮಿಕರಿಗೆ ಉಚಿತ ಮನೆ, ಆರೋಗ್ಯ ಸೌಲಭ್ಯ, ವಿಶ್ರಾಂತಿ ವೇತನ ಹಾಗೂ ಅಪಘಾತ ಪರಿಹಾರಗಳನ್ನು ನೀಡಲು ಕ್ರಮಗಳನ್ನು ಕೈಗೊಳ್ಳಬೇಕು.

ಬೌದ್ಧಿಕ ಆಸ್ತಿ ಹಕ್ಕುಗಳಲ್ಲಿ ಸಸ್ಯ ಮತ್ತು ಜೈವಿಕ ವಸ್ತುಗಳನ್ನು ಪೇಟೆಂಟ್ ಮಾಡುವುದನ್ನು ರದ್ದು ಪಡಿಸಬೇಕು.

ರೈತರು ಉತ್ಪಾದಿಸುವ, ಸುಧಾರಿಸುವ ಮತ್ತು ಕಾಪಾಡುವ ಹಕ್ಕುಗಳನ್ನು ಸಂರಕ್ಷಿಸಬೇಕು.

ಬೀಜ ಕ್ಷೇತ್ರದಲ್ಲಿ ಬಹುರಾಷ್ಟ್ರೀಯ ಕಂಪನಿಗಳ ಪ್ರದೇಶವನ್ನು ರದ್ದು ಪಡಿಸಬೇಕು.

ಬರಗಾಲ ನಿವಾರಣ ಕಾರ್ಯಕ್ರಮಗಳನ್ನು ಸರ್ಕಾರವು ಹಮ್ಮಿಕೊಳ್ಳಬೇಕು.

ಕೃಷಿ ಬೆಲೆ ನೀತಿ ವೈಜ್ಞಾನಿಕವಾಗಿರಬೇಕು ಅಂದರೆ ಅದು ರೈತರ ಬೆಳಕಿಗೆ ಪೂರಕವಾದ ನೀತಿ ಜಾರಿಗೆ ಮಾಡಬೇಕು.

ಹೀಗೆ ರೈತರ ಸಮಸ್ಯೆಯನ್ನು ನಿರ್ಮೂಲನೆ ಮಾಡಬೇಕಾದರೆ ಇಂಥ ಅಂಶಗಳು ಬಗ್ಗೆ ಸರ್ಕಾರ ಗಮನ ವಹಿಸಬೇಕು. ರೈತರಿಗೆ ಅನುಕೂಲವಾಗುವಂತೆ ಮತ್ತು ರೈತರ ಆತ್ಮಹತ್ಯೆ ತಡೆಯಲು ಹಲವಾರು ಕಾರ್ಯಕ್ರಮಗಳು ಜಾರಿಗೆ ತರಬೇಕು. ಜೊತೆಗೆ ರೈತರಿಗೆ ಸಹಕಾರ ನೀಡಿ ರೈತರಿಗೆ ಆತ್ಮ ಸ್ಥೈರ್ಯ ತುಂಬುವ ಕೆಲಸ ಮಾಡಬೇಕು. ಹೀಗೆ ಮಾಡುವುದರ ಮೂಲಕ ರೈತರ ಆತ್ಮ ಹತ್ಯೆ ತಡೆಯಲು ಸಾಧ್ಯ. ಇದರಿಂದ ರೈತರು ಅಭಿವೃದ್ಧಿ ಪಥದಲ್ಲಿ ಮುಂದೆಬರಲು ಸಾಧ್ಯವಾಗುತ್ತದೆ.

## ಕೊನೆಟಿಪ್ಪಣಿಗಳು

೦೧. ಶಿವಸುಂದರ್, 'ರೈತರ ಆತ್ಮ-ಹತ್ಯೆ', ಪು-೮೦

೦೨. ಕರ್ನಾಟಕ ಪ್ರಾಂತ ರೈತ ಸಂಘ ೧೪ನೇ ರಾಜ್ಯ ಸಮ್ಮೇಳನದ ಕರಡು ವರದಿ-೪

೦೩. ಅದೇ, ಪು-೮

೦೪. ಅದೇ, ಪು-೧೪

೦೫. ಕೃಷ್ಣರಾವ್ ವೈಯ್.ವಿ., 'ಸ್ವಾತಂತ್ರ್ಯೋತ್ತರ ಕೃಷಿ ರಂಗ', ಪು-೧೦೭

೦೬. ಅದೇ, ಪು-೧೦೭

೦೭. ಅದೇ, ಪು-೧೦೨

೦೮. ಅದೇ, ಪು-೧೦೨

೦೯. ಕುಮಾರ್ ಕೆ.ಎಂ., 'ಕರ್ನಾಟಕದಲ್ಲಿ ರೈತ ಚಳವಳಿ', ಪು-೭೬

ಅಧ್ಯಾಯ - ಆರು

# ಸಮಾರೋಪ

ಕರ್ನಾಟಕದ ರೈತ ಚಳವಳಿಗಳಲ್ಲಿ ಗುಲಬರ್ಗಾ ಜಿಲ್ಲೆಯ ರೈತ ಚಳವಳಿಗಳು ವಿಭಿನ್ನತೆಯಿಂದ ಕೂಡಿವೆ. ಈ ಜಿಲ್ಲೆಯಲ್ಲಿ ನಡೆದ ರೈತ ಚಳವಳಿಗಳು ಸರ್ಕಾರವನ್ನು ಇಕ್ಕಟ್ಟಿಗೆ ಸಿಲುಕಿಸುವಂತಹ ಸಾಮರ್ಥ್ಯವನ್ನು ಈ ರೈತ ಚಳವಳಿಗಳು ಹೊಂದಿದ್ದವು. ರೈತರ ಹೋರಾಟದ ಹಂತಗಳು ಹಲವು ವಿಶೇಷಗಳಿಂದ ಕೂಡಿದರು. ಅವು ರೈತರ ಸಮಸ್ಯೆಯನ್ನು ಸರ್ಕಾರಕ್ಕೆ ಮನವರಿಕೆ ಮಾಡುವಂತಾಗಿದೆ. ಮತ್ತು ಸಮಸ್ಯೆಗಳನ್ನು ಚಳಿವಳಿಯ ಮೂಲಕ ಪಡೆದಿರುವುದು ಕಂಡುಬರುತ್ತದೆ. ಹಾಗೇ ಈ ಚಳವಳಿಯಲ್ಲಿ ರೈತರ ಬೇಡಿಕೆಗಳನ್ನು ಈಡೇರಿಕೆಗಾಗಿ ಉಗ್ರವಾದ ಪ್ರತಿಭಟನೆ ಮಾಡಿದರು. ಇದರಿಂದ ಜೈಲು ಶಿಕ್ಷೆಯು ಅನುಭವಿಸಿದ್ದಾರೆ. ಹಾಗೂ ಹಲವಾರು ಕಷ್ಟಗಳಿಗೆ ಒಳಗಾಗಿದ್ದಾರೆ. ಹೋರಾಟದ ಫಲವಾಗಿ ಅವಶ್ಯಕವಾದ ಬೇಡಿಕೆಗಳು ಈಡೇರಿದರು. ಅವು ತದನಂತರ ವಿಳಂಬ ನೀತಿಗೆ ಜಾರಿರುವುದು ಕೂಡ ಈ ಅಧ್ಯಯನ ಸಂದರ್ಭದಲ್ಲಿ ಕಂಡು ಬಂದಿದೆ. ವಿವಿಧ ಬಗೆಯ ಚಳವಳಿಗಳು ನಡೆದಿರುವುದು ಗಮನಾರ್ಹವಾದವುಗಳಾಗಿವೆ. ಅವುಗಳನ್ನು ಸಂಕ್ಷಿಪ್ತ ಕಿರುನೋಟದಿಂದ ಗಮನಿಸುವುದು ಅವಶ್ಯಕವಾಗಿದೆ. ಆದ್ದರಿಂದ ಅವುಗಳ ಬಗ್ಗೆ ತಿಳಿಸುವ ಪ್ರಯತ್ನ ಈ ಅಧ್ಯಯನದಲ್ಲಿ ಮಾಡಲಾಗಿದೆ.

ಪ್ರಸ್ತುತ ಸಂಶೋಧನಾ ನಿಬಂಧವು ಗುಲಬರ್ಗಾ ಜಿಲ್ಲೆಯ ರೈತ ಚಳವಳಿಗಳು ಚಾರಿತ್ರಿಕ ಅಧ್ಯಯನ ಎಂಬ ವಿಚಾರದಲ್ಲಿ ವಿಶ್ಲೇಷಣೆ ಕುರಿತದ್ದಾಗಿದೆ. ಅಂದರೆ ರೈತರ ಸಮಸ್ಯೆಗಳು ಮತ್ತು ಪರಿಸ್ಥಿತಿಗಳ ಬಗೆ ಹಾಗೂ ಸರ್ಕಾರದ ಕೃಷಿ ಚಿಂತನೆ, ಸಂಘಟನೆ ರಾಜಕಾರಣ, ಅಂತರರಾಷ್ಟ್ರೀಯ ಶಕ್ತಿಗಳಿಗೆ ಸಂಬಂಧಿಸಿದ ಚಿಂತನೆಗಳನ್ನು ಕುರಿತು ವಿಶ್ಲೇಷಿಸುವಂಥದು. ರೈತರ ಅಸಹಾಯಕ ಸ್ಥಿತಿಯಲ್ಲಿ ಸರ್ಕಾರ ಯಾವುದೇ ಸಹಾಯ ನೀಡದಿದ್ದಾಗ. ಸರ್ಕಾರದ ವಿರುದ್ಧ ನಡೆದ, ಚಳವಳಿಯನ್ನು ಸಾಮಾಜಿಕ ನ್ಯಾಯ ಪ್ರತಿಪಾದಕವಾಗಿ, ಸಮಾಜದಲ್ಲಿ ಕ್ರಾಂತಿಕಾರಿ ಹೋರಾಟಗಳನ್ನು ಸರ್ಕಾರಕ್ಕೆ ಎಚ್ಚರಿಕೆಗಳನ್ನು, ಕೊಡುತ್ತಾ ಬಂದಿದೆ. ಹಾಗೆಯೇ ಕೃಷಿಯಲ್ಲಿ ಜಾಗೃತಿ ಮೂಡಿಸಿದೆ. ರೈತ ಸಂಘಟನೆಗಳು ರೈತರಿಗೆ ಕೃಷಿಕ ಚಿಂತನೆಗಳನ್ನು ತಿಳಿಸುವಲ್ಲಿ ಈ ರೈತ ಚಳವಳಿಯ ಪಾತ್ರ ಪ್ರಮುಖವಾಗಿದೆ.

ಒಂದು ಪ್ರದೇಶದ ಆರ್ಥಿಕ ವ್ಯವಸ್ಥೆಯನ್ನು ನಿರ್ಧರಿಸುವಲ್ಲಿ ಕೃಷಿಯು ಪ್ರಧಾನವಾಗಿದೆ. ಇದು ಒಕ್ಕಲತನ ಮಹತ್ವವನ್ನು ತಿಳಿಯಬಹುದು. 'ಕೋಟಿ ವಿದ್ಯೆಗಿಂತಲು ಮೇಟಿ ವಿದ್ಯೆ ಮಿಗಿಲು' ಎಂಬ ಸರ್ವಜ್ಞ ಹೇಳಿರುವುದು ಅರ್ಥಗರ್ಭಿತವಾಗಿದೆ. ಅಂದರೆ ಕೃಷಿಯ ಪ್ರಾಮುಖ್ಯತೆಯನ್ನು ತಿಳಿಯಬಹುದು. ಇಂಥ ಮಹತ್ವ ಪಡೆದಿರುವ ಕೃಷಿಯ ಬಗ್ಗೆ ಇಂದಿನ ಸರ್ಕಾರಗಳು ಸರಿಯಾದ ಕಾಳಜಿ ಮಾಡದೆ ಇರುವುದರಿಂದ ರೈತರು ಚಳವಳಿಯ ಮೂಲಕ ತಮ್ಮ ಬೇಡಿಕೆಯನ್ನು ಪಡೆಯುವಲ್ಲಿ ಪ್ರಯತ್ನ ಪಟ್ಟಿದ್ದಾರೆ. ಇಂಥ ಚಳುವಳಿಯು ಗುಲಬರ್ಗಾ ಜಿಲ್ಲೆಯಲ್ಲಿ ಹಲವಾರು ರೀತಿಯಿಂದ ಮಹತ್ವ ಪಡೆದುಕೊಂಡಿದೆ. ಈ ಚಳವಳಿಯಲ್ಲಿ ನಡೆದ ಘಟನೆಗಳ ಬಗ್ಗೆ ಹಾಗೂ ರೈತರ ಸಮಸ್ಯೆಗಳು ಏನು? ಮತ್ತು ರೈತರ ಆತ್ಮಹತ್ಯೆಗೆ ಕಾರಣಗಳು ಏನು? ಪ್ರಸ್ತುತ ಸಂದರ್ಭದಲ್ಲಿ ರೈತರ ಸಮಸ್ಯೆಗಳು ಯಾವುವು ಎಂಬುದನ್ನು. ಈ ಅಧ್ಯಯನದಿಂದ ತಿಳಿದುಕೊಳ್ಳುವಲ್ಲಿ ಸಹ ಇದು ಪೂರಕವಾಗಿದೆ.

ಭಾರತ ಕೃಷಿ ಪ್ರಧಾನ ರಾಷ್ಟ್ರವಾಗಿರುವುದರಿಂದ ಇಲ್ಲಿ ಜನರು ಕೃಷಿಯಲ್ಲೇ ಬದುಕನ್ನು ಕಟ್ಟಿಕೊಂಡಿದ್ದಾರೆ. ಆದ್ದರಿಂದ ಕೃಷಿಯನ್ನು ಅಬಿವೃದ್ಧಿ ಪಡಿಸಲು ಈ ಚಳವಳಿ ಬಹಳಷ್ಟು ಮಹತ್ವ ಪಡೆದುಕೊಂಡಿದೆ. ಭಾರತದ ಕೃಷಿಯನ್ನು ನಿರಾಕರಿಸಲು ಸಾಧ್ಯವಿಲ್ಲ. ಈ ಬೃಹತ್ ದೇಶ ಅಷ್ಟೇ ಪ್ರಮಾಣದ ಜನಸಂಖ್ಯೆಯನ್ನು ಹೊಂದಿರುವುದರಿಂದ ಕೃಷಿಯಿಂದ ವಿಮುಖವಾಗಲು ಸಾಧ್ಯವಿಲ್ಲ. ಆದ್ದರಿಂದ ರೈತರ ಅಭಿವೃದ್ಧಿಯೇ ಈ ದೇಶದ ಅಭಿವೃದ್ಧಿಯಾಗಿದೆ. ಅಂದರೆ ಕೃಷಿ ಹಾಗೂ ಕೃಷಿಕ ಸಮಾಜ ಅಗತ್ಯವಾಗಿ ಪಡೆಯಬೇಕಾದ ಸಹಕಾರವನ್ನು ಇಂದಿನ ಸರ್ಕಾರಗಳು ನೀಡದೇ ಇರುವುದರಿಂದ ರೈತ ಆತ್ಮಹತ್ಯೆಗೆ ಮೊರೆಹೋಗಬೇಕಾದ ಸ್ಥಿತಿ ನಿರ್ಮಾಣವಾಗಿದೆ. ಈ ರೈತರ ಆತ್ಮಹತ್ಯೆಯ ಪ್ರಕರಣಗಳು ದಿನೇ ದಿನೇ ಹೆಚ್ಚಾಗುತ್ತಿದೆ. ಇದಕ್ಕೆ ರೈತರ ಮೌಢ್ಯಗಳು ಜಾತಿಯ ಸಣ್ಣತನ ಅನಿವಾರ್ಯತೆಗಳೇ ಅಲ್ಲದೆ ಕೆಲವು ರೈತರು ಮಾಡಿದ ತಪ್ಪುಗಳಿಂದ ಬ್ಯಾಂಕುಗಳು ಕೂಡ ರೈತರನ್ನು ಶೋಷಿಸುತ್ತಿವೆ. ಚೀನಾ ದೇಶದ ಮಾದರಿಯಲ್ಲಿ ಬಡ್ಡಿ ರಹಿತ ಕೃಷಿ ಸಾಲ ನೀಡುವಿಕೆ, ಉತ್ಪಾದನಾ ವೆಚ್ಚ ಆಧಾರಿತ ಬೆಂಬಲ ಬೆಲೆ ನಿಗದೀಕರಣ ಮಾರುಕಟ್ಟೆಯ ನಿಯಂತ್ರಣ ಸಾಲ ಮರುಪಾವತಿಗೆ ಸಂಬಂಧಿಸಿದ ನಿಯಮಾವಳಿಗಳು ಸರಳವಾಗಿರಬೇಕು. ಹಾಗೂ ಕ್ರಮಗಳನ್ನು ಸಮಾನ ನೆಲೆಯಲ್ಲಿ ಸ್ಥಿತಿಸ್ಥಾಪಕತೆ ಹೊಂದುವಂತೆ ರಚಿಸಬೇಕು. ಅಂತರರಾಷ್ಟ್ರೀಯ ಕೃಷಿ ಆಧಾರಿತ ಬಹುರಾಷ್ಟ್ರೀಯ ಕಂಪನಿಗಳ ನಿಯಂತ್ರಣಗಳ ಮತ್ತು ಅಂತರರಾಷ್ಟ್ರೀಯ ಹಣಕಾಸಿನ ಸಂಘ ಸಂಸ್ಥೆಗಳ ಪ್ಯಾಕೇಜ್‌ಗಳನ್ನು ಭಾರತೀಕರಣಗೊಳಿಸಿ, ಬಳಸುವಿಕೆಯಂಥ ಕ್ರಮಗಳಿಂದ ರೈತರ ಪ್ರಸ್ತುತ ಅಸ್ಥಿರ ಹಾಗೂ ಅಭದ್ರವಾದ ಮನಃಸ್ಥಿತಿಗೆ ಸ್ಥಿರ ಹಾಗೂ ಭದ್ರವಾದ ರಚನಾತ್ಮಕ ನಿಯಮಗಳನ್ನು ಸರ್ಕಾರವು ಇಚ್ಛಾಶಕ್ತಿಯಿಂದ ರಚಿಸಿ ರೈತರ ಆತ್ಮಸ್ಥೈರ್ಯ ಹೆಚ್ಚಿಸಬೇಕು. ಇದರಿಂದ ರೈತರ ಆತ್ಮಹತ್ಯೆ ತಡೆಯಬಹುದಾಗಿದೆ. ಇಂಥ ಕಾರ್ಯಕ್ರಗಳ ಕಡೆಗೆ ಗಮನ ಹರಿಸಬೇಕಾಗಿರುವುದು ಸರ್ಕಾರದ ಮುಖ್ಯ ಕಾರ್ಯವಾಗಿದೆ.

ರೈತರ ಪ್ರಮುಖ ಸಮಸ್ಯೆಗಳಲ್ಲಿ ವಿದ್ಯುತ್ ಸಮಸ್ಯೆ ಒಂದು. ಈ ವಿದ್ಯುತ್ ಸಮಸ್ಯೆಯಿಂದ ರೈತರ ಬೆಳೆ ನಾಶವಾಗಿವೆ. ಒಂದು ಕಾಲದಲ್ಲಿ ರಾಜ್ಯ ಜಲವಿದ್ಯುತ್ ಉತ್ಪಾದನೆಯಲ್ಲಿ ಮೊದಲನೇ ಸ್ಥಾನದಲ್ಲಿತ್ತು. ಆದರೆ ಇಂದು ೧೯೭೦ರ ನಂತರ ವಿದ್ಯುತ್ ಅಭಾವವನ್ನು ತೀವ್ರವಾಗಿ ಎದುರಿಸುತ್ತಿದೆ. ಕೈಗಾರಿಕಾ ಬೆಳವಣಿಗೆ, ನಗರೀಕರಣದಿಂದ ವಿದ್ಯುತ್ ಬಳಕೆ ಮುಮ್ಮಡಿಗೊಂಡಿರುವ ಕಾರಣ ಪೂರೈಕೆಗಿಂತ ಬೇಡಿಕೆ ಜಾಸ್ತಿಯಾಗಿದೆ. ವಿದ್ಯುತ್ ಪ್ರಸರಣದಲ್ಲೂ ಶೇಕಡಾ ೨೦ಕ್ಕಿಂತ ಹೆಚ್ಚಿನ ವಿದ್ಯುತ್ ಪೋಲಾಗುತ್ತಿದೆ. ಕೇಂದ್ರ ಮತ್ತು ರಾಜ್ಯಗಳ ವೈರುಧ್ಯದ ವಿದ್ಯುತ್ ನೀತಿಗಳಿಂದ ರೈತರು ಪರದಾಡುವ ಪರಿಸ್ಥಿತಿ ಅನುಭವಿಸುತ್ತಿದ್ದಾರೆ. ಕಳೆದ ಮೂರು ನಾಲ್ಕು ವರ್ಷಗಳಿಂದ ರಾಜ್ಯದಲ್ಲಿ ಭೀಕರ ಬರಗಾಲದಿಂದ ಮಳೆಯಿಲ್ಲದೆ ವಿದ್ಯುತ್ ಉತ್ಪಾದನೆ ಇಳಿಮುಖಗೊಂಡಿದೆ. ಹೊರ ರಾಜ್ಯಗಳಿಂದ ಎಷ್ಟೇ ವಿದ್ಯುತ್ ಖರೀದಿಸಿದರೂ ರೈತರ ಬೇಡಿಕೆಗೆ ತಕ್ಕಂತೆ ವಿದ್ಯುತ್ ಪೂರೈಕೆ ಮಾಡದೆ ಇರುವುದು ರೈತರಿಗೆ ನುಂಗಲಾರದ ತುತ್ತಾಗಿದೆ. ವಿದ್ಯುತ್ ಕೊರತೆಯಿಂದ ಮತ್ತು ಅಸಮರ್ಪಕ ವಿದ್ಯುತ್ ಸರಬರಾಜಿನಿಂದ ರೈತರ ಬೆಳೆಗಳ ಮೇಲೆ ತೀವ್ರವಾದ ದುಷ್ಪರಿಣಾಮ ಬೀರಿದೆ. ಇದರಿಂದ ರೈತರ ಬೆಳೆ ನಾಶವಾಗಿ ಬ್ಯಾಂಕುಗಳಿಂದ ಮಾಡಿದ ಸಾಲ ತೀರಿಸಲಾಗದೆ, ಸ್ವಾಭಿಮಾನಕ್ಕೆ ಧಕ್ಕೆಯಾಗುತ್ತದೆ ಎಂದು ತಿಳಿದುಕೊಂಡ ರೈತರು ಆತ್ಮಹತ್ಯೆ ಮಾಡಿಕೊಂಡಿರುವುದು ಈ ಅಧ್ಯಯನದಿಂದ ತಿಳಿದು ಬಂದಿದೆ. ಆದ್ದರಿಂದ ವಿದ್ಯುತ್ ಸಮಸ್ಯೆಯು ರೈತರ ಪರಿಹಾರ ಸಮಸ್ಯೆಗಳಲ್ಲಿ ಇಂದು ಒಂದಾಗಿದೆ. ಇದನ್ನು ತಡೆಯಲು ರೈತರು ಮತ್ತು ರೈತ ಸಂಘಟನೆಗಳು, ರಾಜಕೀಯ ಪಕ್ಷಗಳು, ಮಹಿಳೆಯರು, ಮಠಾಧೀಶರು, ವಿದ್ಯಾರ್ಥಿಗಳು ಮಾಡಿದ ಹೋರಾಟ ನೆಲೆಗಳನ್ನು ತಿಳಿಸುವುದು ಈ ಅಧ್ಯಯನದಲ್ಲಿ ತಿಳಿಸಲು ಕಿರು ಪ್ರಯತ್ನ ಮಾಡಲಾಗಿದೆ.

ಈ ಗುಲಬರ್ಗಾ ಜಿಲ್ಲೆಯ ರೈತ ಚಳವಳಿಯ ಅಧ್ಯಯನದಿಂದ ತಿಳಿದು ಬಂದಿರುವ ಇನ್ನೊಂದು ಪ್ರಮುಖವಾದ ಅಂಶವೆಂದರೆ ಬೀಜ, ಗೊಬ್ಬರ ಹಾಗೂ ರಾಸಾಯನಿಕಗಳಿಂದಾಗುವ ಪರಿಣಾಮಗಳಿಂದ ರೈತರು ಆರ್ಥಿಕವಾಗಿ ಹಿಂದುಳಿಯುವಲ್ಲಿ ಕಾರಣವಾಗಿವೆ. ಅಂದರೆ ಹಸಿರು ಕ್ರಾಂತಿ ಉಂಟಾದ ಮೇಲೆ ಜನರಲ್ಲಿ ಸುಧಾರಿತ ತಳಿಗಳನ್ನು ಬಳಸುವ ಮನೋಧರ್ಮ ಹೆಚ್ಚಾಗತೊಡಗಿದೆ. ಈ ತಳಿಗಳನ್ನು ಬಳಸಿದರೆ ಕಡ್ಡಾಯವಾಗಿ ಕೀಟನಾಶಕ ಗೊಬ್ಬರ ಇತರ ವೈಜ್ಞಾನಿಕ ಸಂರಕ್ಷಣಾ ವಿಧಾನ ಅನುಸರಿಸಬೇಕು. ಇಂದು ಆಧುನಿಕ ತಂತ್ರಜ್ಞಾನದ ಹೆಸರಿನಲ್ಲಿ ರೈತರನ್ನು ವಂಚಿಸುವ ವಂಚಕರ ಜಾಲ ದೇಶಾದ್ಯಂತ ಹರಡಿದೆ. ಬೇನಾಮಿ ಮತ್ತು ನಕಲಿ ಹೆಸರುಗಳಡಿ ಕಾಳ ಸಂತೆಯಲ್ಲಿ ಬಿತ್ತನೆ ಬೀಜ ಸರಬರಾಜು ಮಾಡುವ ಕಳ್ಳದಂಧೆ ಹೆಚ್ಚಿದೆ. ಇಂಥಹ ಬೀಜ ಬಿತ್ತನೆ ಮಾಡಿದ ಅದೆಷ್ಟೋ ರೈತರ ಬದುಕೆಲ್ಲ ಶೂನ್ಯವಾಗಿದೆ. ಮೊಳಕೆ ಹೊಡೆದು ಬೆಳೆದರೂ ಫಲ ನೀಡದಂತ ಸ್ಥಿತಿ ನಿರ್ಮಾಣವಾಗಿದೆ. ಇದರಿಂದ ಗುಲಬರ್ಗಾದಲ್ಲಿ ನಕಲಿ ಬೀಜ, ಗೊಬ್ಬರ ಮತ್ತು ಕ್ರಿಮಿನಾಶಕ ಶಕ್ತಿ ಉಪಯೋಗಿಸದ ರೈತರು. ಫಲ ನೀಡಲಿಲ್ಲ ಎಂದು ತಾವು ಮಾಡಿದ ಸಾಲದ ಹೊರೆಗೆ ಅಂಜಿಕೊಂಡು ಆತ್ಮಹತ್ಯೆ ಮಾಡಿಕೊಂಡಿರುವುದನ್ನು ಈ ಅಧ್ಯಯನದಿಂದ

ತಿಳಿದು ಬಂದಿದೆ. ಹಾಗೆ ಇಂಥ ನಕಲಿ ಬೀಜ, ಗೊಬ್ಬರ, ಕ್ರಿಮಿನಾಶಕಗಳು ನೋಡಲು ಚೆನ್ನಾಗೆ ಕಂಡರು ಅವುಗಳನ್ನು ಬಳಸಿದ ಕೂಡಲೇ ಬೆಳೆನಾಶವಾದ ಉದಾಹರಣೆಗಳಿವೆ. ಇಂಥ ನಕಲಿ ಬೀಜ, ಗೊಬ್ಬರ, ಕ್ರಿಮಿನಾಶಕ ಎಣ್ಣೆ ಬಳಕೆಗಳು ರೈತರನ್ನು ಮತ್ತಷ್ಟು ಆರ್ಥಿಕವಾಗಿ ಬಲ ಹೀನರನ್ನಾಗಿ ಮಾಡಿ, ರೈತರ ಆತ್ಮಸ್ಥೈರ್ಯ ಕಳೆಯುವಂತೆ ಮಾಡಿವೆ. ಇದರಿಂದ ರೈತರ ಸಾಲದ ಬಾಧೆ ಮತ್ತು ಸರಿಯಾದ ಫಲಸಿಗದೆ ಇದ್ದಾಗ ರೈತರು ಆತ್ಮಹತ್ಯೆಗೆ ಶರಣಾಗಿರುವುದನ್ನು ಈ ಅಧ್ಯಯನದಲ್ಲಿ ತಿಳಿಸಲು ಕಿರು ಪ್ರಯತ್ನ ಮಾಡಲಾಗಿದೆ.

ಕೃಷಿಯನ್ನು ಅಭಿವೃದ್ಧಿ ಪಡಿಸಬೇಕಾದರೆ ನೀರಾವರಿಯಾಗಬೇಕು. ನೀರಾವರಿ ಇಲ್ಲದೆ ರೈತರು ಏಳಿಗೆ ಸಾಧ್ಯವಿಲ್ಲ. ಆದ್ದರಿಂದ ನೀರಾವರಿಯ ಮಹತ್ವವು ಸಹ ಈ ಅಧ್ಯಯನದಲ್ಲಿ ತಿಳಿಸಲಾಗಿದೆ. ನೀರಾವರಿಯ ಸಮಸ್ಯೆಗಳು ಸಹ ತಿಳಿಸಲಾಗಿದೆ. ನೀರಾವರಿಗಾಗಿ ನಡೆದ ಚಳವಳಿಯ ಚಾರಿತ್ರಿಕವಾಗಿ ಮಹತ್ವ ಪಡೆದುಕೊಂಡಿರುವುದು ತಿಳಿಸಲಾಗಿದೆ. ಪ್ರಸ್ತುತ ಸಂದರ್ಭದಲ್ಲಿ ನೀರಾವರಿ ಉತ್ತಮ ರೀತಿಯಾದ ಮತ್ತು ಪರಿಣಾಮಕಾರಿ ನೀರಾವರಿ ಪದ್ಧತಿ ಅಳವಡಿಕೆಯಾಗದೆ ಕೃಷಿ ಕಾರ್ಯಾಚರಣೆಯು ಉದ್ದೀಪನಗೊಳ್ಳುತ್ತದೆ. ನೀರಾವರಿ ಮೂಲಗಳೆಂದರೆ ಕೆರೆಗಳು, ತೆರೆದ ಬಾವಿಗಳು, ಕೊಳವೆ ಬಾವಿಗಳು, ತೊರೆಗಳು, ಕಾಲುವೆಗಳು, ಏತ ನೀರಾವರಿಗಳು ಹಾಗೂ ನದಿಗಳ ಆಶ್ರಯದಿಂದ ಕೂಡಿದೆ. ಬಗ್ಗೆ ಈ ಅಧ್ಯಯನದಲ್ಲಿ ತಿಳಿಸಲು ಪ್ರಯತ್ನಿಸಲಾಗಿದೆ. ಕರ್ನಾಟಕ ರಾಜ್ಯಕೂಡ ಹೆಚ್ಚಾಗಿ ಈ ಮೂಲಗಳನೇ ಅವಲಂಬಿಸಿದ್ದು ಕಂಡುಬರುತ್ತದೆ.

ಅಸಮರ್ಪಕ ನೀರಾವರಿ ವ್ಯವಸ್ಥೆಯಿಂದ ರೈತರು ಬರಗಾಲದ ಸಂದರ್ಭದಲ್ಲಿ ಬದುಕಲು ಕಷ್ಟವಾಗಿದೆ. ಇದರಿಂದ ಸಹ ರೈತರು ಆರ್ಥಿಕವಾಗಿ ಬಲಹೀನರನ್ನಾಗಿ ಮಾಡಿದೆ. ೧೯೫೦-೫೧ರಲ್ಲಿ ನೀರಾವರಿಯ ಎಲ್ಲಾ ಮೂಲಗಳಿಂದ ೧೨೩.೨೧ ಸಾವಿರ ಹೆಕ್ಟೇರ್‌ನಷ್ಟು ನೀರಾವರಿ ಹೊಂದಿತು. ಅಂದರೆ ವಿಸ್ತೀರ್ಣದಲ್ಲಿ ಶೇಕಡಾ ೧೬ರಷ್ಟು ಭೂಪ್ರದೇಶ (೧೯೭೬ ಸಾವಿರ ಹೆಕ್ಟೇರ್) ಕಾಲುವೆ, ತೆರೆದ ಬಾವಿ, ಕೊಳವೆಬಾವಿ, ಏತ ನೀರಾವರಿಗಳಿಂದ ನೀರುಂಡಿದೆ. ೧೯೫೫-೫೬ರಲ್ಲಿ ಶೇಕಡಾ ೧-೪ರಷ್ಟು ಹೆಚ್ಚುವರಿಯಾಗಿ ಸೇರ್ಪಡೆಯಾಗಿದೆ. ಮತ್ತು ಇದು ೧೯೬೮-೬೯ರ ವೇಳೆಗೆ ಇದರ ಪ್ರಮಾಣ ಶೇಕಡಾ ೨೧ರಷ್ಟಾಯಿತು. ಇಂದಿಗೂ ಉಳಿದ ೭೯ರಷ್ಟು ಕೃಷಿ ಭೂಮಿ ನೇರ ಮಳೆ ಆಶ್ರಯಿಸಿದ. ಆದ್ದರಿಂದ ಕೃಷಿ ರಂಗದಲ್ಲಿ ಪ್ರಗತಿಯನ್ನು ಸಾಧಿಸಲು ಸಾಧ್ಯವಿಲ್ಲದ್ದಾಗಿದೆ. ಕೃಷಿ ಅಭಿವೃದ್ಧಿಯಾಗಬೇಕಾದರೆ ಒಟ್ಟು ಭೂ ಪ್ರದೇಶದಲ್ಲಿ ಶೇಕಡಾ ೭೦ರಷ್ಟು ನೀರಾವರಿ ವ್ಯವಸ್ಥೆಯನ್ನು ಕಲ್ಪಿಸಿಕೊಟ್ಟಾಗ ಮಾತ್ರ ಕೃಷಿ ರಂಗದ ಅಭಿವೃದ್ಧಿಯ ಜೊತೆಗೆ ಭಾರತದ ಆರ್ಥಿಕತೆಯು ಉನ್ನತ ಮಟ್ಟಕ್ಕೆ ಹೋಗಲು ಸಾಧ್ಯವಾಗುತ್ತದೆ. ಈ ಒಂದು ವಿಚಾರದಲ್ಲಿ ನೀರಾವರಿಗಾಗಿ ನಡೆದ ಚಳವಳಿಯು ನೀರಾವರಿಯ ಮಹತ್ವ ಮತ್ತು ರೈತರ ಏಳಿಗೆಯನ್ನು ಬಯಸಿರುವುದು ಈ ಚಳವಳಿಯಿಂದ ತಿಳಿದು ಬಂದಿದೆ. ಭಾರತ ಒಂದು ಅಭಿವೃದ್ಧಿ ರಾಷ್ಟ್ರವಾಗಿ ಮುಂದುವರೆಯಲು ನೀರಾವರಿ ಅವಶ್ಯಕವಾಗಿದೆ. ಸಮರ್ಪಕ ನೀರಾವರಿಯಿಂದ ರೈತರ ಸಮಸ್ಯೆಗಳು

ಹಾಗೂ ರೈತರ ಆತ್ಮಹತ್ಯೆಯನ್ನು ತಡೆಯಲು ನೀರಾವರಿ ವ್ಯವಸ್ಥೆಯು ಪ್ರಮುಖವಾಗಿರುವುದನ್ನು ಈ ಅಧ್ಯಯನದಲ್ಲಿ ತಿಳಿಸಲು ಕಿರು ಪ್ರಯತ್ನ ಪಡಲಾಗಿದೆ.

ಈ ಮೇಲಿನ ಎಲ್ಲಾ ಅಂಶಗಳ ಅಧ್ಯಯನ ಮಾಡಿದರು, ಇದೇ ಅಂತಿಮವಲ್ಲ. ಈ ಪ್ರದೇಶದಲ್ಲಿ ಇನ್ನು ಅನೇಕ ಚಳವಳಿ ನಡೆದಿರುವುದು ಕಂಡುಬರುತ್ತದೆ. ಏಕೆಂದರೆ ಇದರಲ್ಲಿ ಕೆಲವು ಪ್ರಮುಖ ಚಳವಳಿಯನ್ನು ಮಾತ್ರ ಆಯ್ಕೆ ಮಾಡಿಕೊಂಡು ಅಧ್ಯಯನ ಮಾಡಲಾಗಿದೆ.

ಇನ್ನೂ ಸೂಕ್ಷ್ಮವಾಗಿ ಹಲವಾರು ಚಳವಳಿಯ ಬಗ್ಗೆ ಸಮಗ್ರವಾಗಿ ಮತ್ತು ಎಲ್ಲಾ ಚಳವಳಿಯ ಬಗ್ಗೆ ಅಧ್ಯಯನ ಮಾಡಿದರೆ ಇನ್ನೂ ರೈತರ ಹೋರಾಟಗಳ ಮಾಹಿತಿಗಳು ದೊರಕುವ ಸಾಧ್ಯತೆ ಇದೆ. ಇದರ ಬಗ್ಗೆ ಸಮಗ್ರವಾದ ಅಧ್ಯಯನ ಮಾಡಬಹುದಾಗಿದೆ. ಒಟ್ಟಾರೆ ಹೇಳುವುದಾರೆ. ಈ ಅಧ್ಯಯನದಿಂದ ರೈತರ ಕಷ್ಟಗಳು ಮತ್ತು ಸಮಸ್ಯೆಗಳ ಪರಿಹಾರ ಕಂಡುಕೊಳ್ಳುವಲ್ಲಿ ಈ ರೈತ ಚಳವಳಿಯ ಪಾತ್ರ ಬಹಳಷ್ಟು ಮಹತ್ವ ಪಡೆದುಕೊಂಡಿವೆ. ಹಾಗೇ ಈ ಚಳವಳಿಯು ಸರ್ಕಾರಕ್ಕೆ ಎಚ್ಚರಿಕೆ ಮುಟ್ಟಿಸುವಲ್ಲಿ ಸಹ ಪ್ರಮುಖವಾಗಿದೆ. ಈ ಎಲ್ಲಾ ಅಂಶಗಳ ತಿಳಿಸುವ ಪ್ರಯತ್ನ ಈ ಕಿರು ಪ್ರಬಂಧದಲ್ಲಿ ಅಧ್ಯಯನದಲ್ಲಿ ಮಾಡಲಾಗಿದೆ. ಹೀಗೆ ಸಮಾಜದ ದಿಕ್ಕನ್ನು ಬದಲಾವಣೆ ಮಾಡುವಂತ ಶಕ್ತಿ ಈ ರೈತ ಚಳವಳಿಗಳು ಹೊಂದಿವೆ ಎಂದು ಹೇಳಬಹುದು.

# ಅನುಬಂಧಗಳು

* ಆಧಾರಗ್ರಂಥಗಳು
* ದಿನಪತ್ರಿಕೆಗಳು
* ಮಾಹಿತಿ ಕೊಟ್ಟವರ ವಿವರ
* ಭೂಪಟಗಳು
* ಛಾಯಾಚಿತ್ರಗಳು

# ಆಧಾರಗ್ರಂಥಗಳು

೦೧. ಅನಂತರಾಮರಾವ್ .ಕೆ., ಸುವರ್ಣ ಕರ್ನಾಟಕ ದರ್ಶನ, ವಿದ್ಯಾ ಪಬ್ಲಿಸಿಂಗ್ ಹೌಸ್, ಶ್ರೀ ನಿಲಯ, ಮಂಗಳೂರು, ೧೦೦೬

೦೨. ಅನಂತರಾಮು .ಟಿ.ಆರ್., ನಮ್ಮ ಜಲಸಂಪನ್ಮೂಲಗಳು, ನ್ಯಾಷನಲ್ ಬುಕ್ ಟ್ರಸ್ಟ್ ಇಂಡಿಯಾ, ೧೯೯೫

೦೩. ಅವಲಮೂರ್ತಿ .ಎ.ಓ., ಅದ್ಭುತ ದ್ರವ ನೀರು, ಕನ್ನಡ ಪುಸ್ತಕ ಪ್ರಾಧಿಕಾರ ಕರ್ನಾಟಕ ಸರ್ಕಾರ, ೧೯೯೮

೦೪. ಕಟಗಿಹಳ್ಳಿಮಠ .ಎಸ್.ಎಸ್., ಸಾವಯವ ಕೃಷಿ, ದಿಕ್ಸೂಚಿ ಲೇಖನಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೬

೦೫. ಕುಮಾರ್ .ಕೆ.ಎಂ., ಕರ್ನಾಟಕದಲ್ಲಿನ ರೈತ ಚಳುವಳಿ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೮

೦೬. ಕೂಸಣ್ಣ ದಾಸನೂರು. "ರೈತರ ಆತ್ಮಹತ್ಯೆ ಮತ್ತು ದಲಿತರ ನವಬ್ರಾಹ್ಮಣಿಕೆ", ಮಾತಂಗ ಪ್ರಕಾಶನ, ಮೈಸೂರು, ೨೦೦೫

೦೭. ಗಂಗಾಧಾರ ಬಿ. ದೊಡಕುಂಡಿ., ಕುಡಿಯುವ ನೀರು, ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೧೯೯೦

೦೮. ಗಾಯಿತ್ರಿ ಮೂರ್ತಿ, ನೀರು, ನವಕರ್ನಾಟಕ ಪ್ರಕಾಶನ, ಬೆಂಗಳೂರು, ೧೯೯೪

೦೯. ಗೋಪಾಲರಾವ್ .ಎಚ್.ಎಸ್., ಕರ್ನಾಟಕ ಏಕೀಕರಣ ಇತಿಹಾಸ, ರಾಷ್ಟ್ರೋತ್ಥಾನ ಸಾಹಿತ್ಯ, ಬೆಂಗಳೂರು, ೨೦೦೧

೧೦. ಗೋವಿಂದಯ್ಯ .ಟಿ., ರಾಜಕೀಯ ಸುಳಿಯಲ್ಲಿ ಆಲಿಮಟ್ಟಿ ಆಣೆಕಟ್ಟು ಭಾಗ ೧, ಸಮಾಜ ವಿಜ್ಞಾನ ಸಂಶೋಧನಾ ಸಂಸ್ಥೆ, ಬೆಂಗಳೂರು, ೧೯೯೭

೧೧. ಗೋವಿಂದರಾಜು .ಸಿ.ಆರ್., ಕರ್ನಾಟಕದ ಏಕೀಕರಣ ಚಳವಳಿ ಮತ್ತು ಸಾಹಿತ್ಯ, ಸಪ್ನ ಬುಕ್ ಹೌಸ್, ಬೆಂಗಳೂರು, ೧೯೯೮

೧೨. ಚಂದ್ರ ಪೂಜಾರಿ, ಜನಾಯೋಜನೆ ಹೈದರಾಬಾದ್ ಕರ್ನಾಟಕದ ಅನುಭವಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪

೧೩. ಚಂದ್ರಶೇಖರ್ ಹೆಚ್., ಕರ್ನಾಟಕದಲ್ಲಿ ಜಲಸಂಪತ್ತು ಮತ್ತು ನೀರಾವರಿ, ಕರ್ನಾಟಕ ಸಂಗಾತಿ, ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು

೧೪. ಚೇತನ್ ಕುಮಾರ್ ಲಿಂಗದಹಳ್ಳಿ (ಸಂ)., ಗೋಲಿಬಾರ್ ಗೌರ್ಮೆಂಟಲ್ಲಿ ರೈತರ ಕಗ್ಗೊಲೆ, ನೆಲದವ್ವ ಪ್ರಕಾಶನ, ಬೆಗಳೂರು, ೨೦೦೮

೧೫. ಜೋಶಿ ಜಿ.ವಿ., ದಕ್ಷಿಣ ಕನ್ನಡ ಜಿಲ್ಲೆಯ ರೈತ ಹೋರಾಟ, ಪ್ರಸಾರಾಂಗ, ಮಂಗಳಗಂಗೋತ್ರಿ ವಿಶ್ವವಿದ್ಯಾಲಯ, ಮಂಗಳೂರು, ೧೯೯೯

೧೬. ದೇವರಕೊಂಡಾರೆಡ್ಡಿ, ಕೃಷ್ಣಾ ಮೇಲ್ದಂಡೆ ಯೋಜನೆ ಮುಳುಗಡೆ ಗ್ರಾಮಗಳಲ್ಲಿನ ಶಾಸನಗಳ ಅಧ್ಯಯನ, ಪ್ರಸಾರಾಂಗಕ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೫

೧೭. ಧರ್ಮದರ್ಶಿ ಹರಿಕೃಷ್ಣ ಪುನರೂರು, ಗುಲಬರ್ಗಾ ಜಿಲ್ಲಾ ಕಥಾ ಸಂಕಲನ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೪

೧೮. ನಾಗಭೂಷಣ ಡಿ.ಎಸ್., "ರೈತರ ಭಾರತ : ಅವಶಾನದ ಅಂಚಿನಲ್ಲಿ", ಲೋಹಿಯಾ ಪ್ರಕಾಶನ, ಬಳ್ಳಾರಿ, ೨೦೦೮

೧೯. ನಾಗರಾಜ್ ಎಂ.ಜಿ., ಕರ್ನಾಟಕ ರೈತ ಚಳುವಳಿ ಸತ್ಯಾಗ್ರಹಗಳು, ಸಂಪುಟ ೧,೨,೩, ಕರ್ನಾಟಕ ವಿಧಾನ ಮಂಡಲದ, ಗ್ರಂಥಾಲಯ ಸಮಿತಿ, ವಿಧಾನಸೌಧ, ಬೆಂಗಳೂರು, ೨೦೦೬

೨೦. ನಾಗೇಶ್ ಎಚ್. ಸಂ., ಶರಣ ಸಮಾಜ, ಮಾತ್ರೋಶ್ರೀ ಪ್ರಕಾಶನ, ಮುದ್ದೇಬಿಹಾಳ, ೨೦೦೪

೨೧. ನಾಗೇಶ್ ಹೆಚ್.ವಿ, ಪುನಿತ ಎ.ಇ.: ಭಾರತದಲ್ಲಿ ರೈತರ ಹೋರಾಟಗಳು, ಚಂದ್ರನಾಥ ಪ್ರಕಾಶನ, ಧಾರವಾಡ. ೧೯೮೪

೨೨. ಪಾಟೀಲ ಸಿ.ಡಿ., ದ್ರವ ಬಂಗಾರ ನೀರು, ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೧೯೯೭

೨೩. ಪುಟ್ಟಪ್ಪ ಕೆ.ವಿ. ಪ್ರ.ಸಂ., ಅಶೋಕ, ವೆಸ್ಲಿ ಪ್ರೆಸ್ ಆಂಡ್ ಪಬ್ಲಿಷಿಂಗ್ ಹೌಸ್, ಮೈಸೂರು, ೧೯೫೨

೨೪. ಪುಟ್ಟಯ್ಯ ಬಿ.ಎಂ., ದಲಿತರು ಮತ್ತು ಭೂಮಿಯ ಪ್ರಶ್ನೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೮

೨೫. ಪೊಲೀಸ್ ಪಾಟೀಲ ಆರ್.ಎಲ್., ನೀರಾವರಿ ಮತ್ತು ರೈತರ ಅಭಿವೃದ್ಧಿ, ಶ್ರೀ ಸಿದ್ಧವೀರ ಶಿವಚಾರ್ಯ ಜ್ಞಾನ ಪ್ರಕಾಶನ, ಬಳ್ಳಾರಿ, ೧೯೯೪

೨೬. ಬಸವರಾಜ ಎನ್. ಅಕ್ಕಿ.: ಕರ್ನಾಟಕದ ಇತಿಹಾಸ ಮತ್ತು ಸಂಸ್ಕೃತಿ, ಸೋಮೇಶ್ವರ ಪ್ರಕಾಶನ ಧಾರವಾಡ, ೨೦೦೪

೨೭. ಬಸವರಾಜ ಸಬರದ (ಪ್ರ.ಸಂ)., ಕಲಬುರ್ಗಿ ಜಿಲ್ಲಾ ದರ್ಶನ, ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೨೦೦೫

೨೮. ಬಾಸ್ಕರಾವ್ ಮೂಡಬೂಳ, ಮರೆತು ಹೋದ ಸುರಪುರ ಇತಿಹಾಸ, ಎಸ್.ಜಿ.ಪ್ರೋಸೆಸ್, ಬೆಂಗಳೂರು, ೨೦೦೧

೨೯. ಮಹಾಬಲೇಶ್ವರಪ್ಪ ಬಿ.ಸಿ., ಹೈದರಬಾದ ಕರ್ನಾಟಕದಲ್ಲಿ ಸ್ವಾತಂತ್ರ್ಯ ಚಳುವಳಿ, ಪ್ರಸಾರಾಂಗ, ಗುಲಬರ್ಗಾ, ವಿಶ್ವವಿದ್ಯಾಲಯ, ಗುಲಬರ್ಗಾ, ೧೯೯೪

೩೦. ಮಹಾಬಲೇಶ್ವರಪ್ಪ ಬಿ.ಸಿ., ಹೈದರಾಬಾದ ಕರ್ನಾಟಕದಲ್ಲಿ ಸ್ವಾತಂತ್ರ್ಯ ಚಳುವಳಿ, ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೧೯೯೭

೩೧. ಮುಜಾಫರ್ ಅಸ್ಸಾದಿ., ರೈತ, ರೈತ ಹೋರಾಟ ಹಾಗೂ ಸಾಮಾಜಿಕ ಚಳುವಳಿ, ಪ್ರಕಾಶಕರು, ಪ್ರಗತಿ ಗ್ರಾಫಿಕ್ಸ್, ಬೆಂಗಳೂರು, ೨೦೦೯

೩೨. ಮೂರ್ತಿ ಎನ್., ಹೋರಾಟದ ಮಹಾಪ್ರಬಂಧ ಸಂಪುಟ-೨, ಪ್ರಕಾಶಕರು ಕರ್ನಾಟಕ ದಲಿತ ಸಂಘರ್ಷ ಸಮಿತಿ, ಬೆಂಗಳೂರು, ೨೦೦೬

೩೩. ಮೋಹನಕೃಷ್ಣ ರೈ.ಕೆ., ವಸಾಹತುಶಾಹಿ ಮತ್ತು ನಗರೀಕರಣ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭

೩೪. ಮೋಹನಕೃಷ್ಣ ರೈ.ಕೆ., ಚರಿತ್ರೆ ಕಥನ, ಪಲ್ಲವ ಪ್ರಕಾಶನ, ಬಳ್ಳಾರಿ, ೨೦೦೯

೩೫. ರಾಜಾರಾಮ ಹೆಗಡೆ, ಕೆರೆ ನೀರಾವರಿ ನಿರ್ವಹಣೆ ಚಾರಿತ್ರಿಕ ಅಧ್ಯಯನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨

೩೬. ರಾಮಕೃಷ್ಣ ಜಿ., ಸ್ವಾತಂತ್ರ್ಯೋತ್ತರ ಕೃಷಿರಂಗ, ನವಕರ್ನಾಟಕ ಪ್ರಕಾಶನ, ಬೆಂಗಳೂರು, ೧೯೯೮

೩೭. ಲಕ್ಷ್ಮಣ ತೆಲಗಾವಿ, ಹಿಂದುಳಿದ ವರ್ಗಗಳ ಮತ್ತು ದಲಿತ ಚಳವಳಿಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯

೩೮. ವಾಸುದೇವನ್ .ಸಿ.ಎಸ್., ಹಂಪಿ ಪರಿಸರದ ಕೆರೆಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧

೩೯. ವಿಜಯ ಟಿ.ಪಿ., ರೈತ ಚಳವಳಿಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯

೪೦. ವಿರೂಪಾಕ್ಷಿ ಪೂಜಾರಹಳ್ಳಿ, ಚಿತ್ರದುರ್ಗ ಜಿಲ್ಲೆಯ ಬುಡಕಟ್ಟು ವೀರರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨

೪೧. ವಿರೂಪಾಕ್ಷಿ ಪೂಜಾರಹಳ್ಳಿ, ವಾಲ್ಮೀಕಿ ಸಿರಿ, ಚಿನ್ನಹಗರಿ ಪ್ರಕಾಶನ, ಕೆ.ಬಿ.ಹಟ್ಟಿ, ಪೂಜಾರಹಳ್ಳಿ, ೨೦೦೬

೪೨. ವಿರೂಪಾಕ್ಷಿ ಪೂಜಾರಹಳ್ಳಿ, ಚಿನ್ನಹಗರಿ ಸಿರಿ, ಚಿನ್ನಹಗರಿ ಪ್ರಕಾಶನ ಪೂಜಾರಹಳ್ಳಿ, ೨೦೦೬

೪೩. ವಿರೂಪಾಕ್ಷಿ ಪೂಜಾರಹಳ್ಳಿ, ಬೇಟೆ ಮತ್ತು ಬೇಡರು, ಚಿನ್ನಹಗರಿ ಪ್ರಕಾಶನ, ಪೂಜಾರಹಳ್ಳಿ, ೨೦೦೭

೪೪. ವೆಂಕಟರತ್ನಂ ಎಂ.ಬಿ ಮತ್ತು ಪದ್ಮಾ ಎಂ.ಬಿ., ಇತಿಹಾಸ ಸಂಶೋಧನಾ ಮಾರ್ಗ, ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಕಂಪನಿ ಲಿಮಿಟೆಡ್, ಬೆಂಗಳೂರು, ೧೯೮೫

೪೫. ವೆಂಕಟರಾವ್ ಆರ್., ಒಕ್ಕಲಿಗನ ಕೂಗು, ಪ್ರಕಾಶಕರು, ಗಾಂಧಿ ದುನಿಯಾ ಹೈದರಾಬಾದ್, ೧೯೯೮

೪೬. ಶರಶ್ಚಂದ್ರ ರಾನಡೆ ಜಿ. ಕೃಷಿ ಉತ್ಪನ್ನ ದರ್ಪಣ, ಅಭಿನವ ಪ್ರಕಾಶನ, ಬೆಂಗಳೂರು, ೨೦೦೪

೪೭. ಶಾಮಣ್ಣ ಕಡಿದಾಳು. "ಆದಶಕ", ಅಹರ್ನಿಶಿ ಪ್ರಕಾಶನ, ಶಿವಮೊಗ್ಗ, ೨೦೦೯

೪೮. ಶಾರದ ಪ್ರಸಾದ್ ಎನ್.ಎಸ್.(ಅನು)., ಭಾರತದ ಪ್ರೌಢ ಇತಿಹಾಸ, ಪ್ರಸಾರಾಂಗ, ಮಾನಸಗಂಗೋತ್ರಿ ವಿಶ್ವವಿದ್ಯಾಲಯ, ಮೈಸೂರು, ೨೦೦೩

೪೯. ಶಿವಸುಂದರ್, ರೈತರ ಆತ್ಮಹತ್ಯೆ ಜಾಗತೀಕರಣದ ಉರುಳಿಗೆ ರೈತರ ಕೊರಳು, ಲಂಕೇಶ ಪ್ರಕಾಶನ, ಬೆಂಗಳೂರು, ೨೦೦೮

೫೦. ಶ್ರೀಧರ ಅಡಿಗ., ಕರ್ನಾಟಕದ ಪ್ರೇಕ್ಷಣೀಯ ಸ್ಥಳಗಳು, ಕೃಷಿ ವಿಕಾಸ್ ಪಬ್ಲಿಕೇಷನ್ಸ್, ಬೆಂಗಳೂರು, ೨೦೦೬

೫೧. ಶೇಷನಾರಾಯಣ, ನಮ್ಮ ನದಿಗಳು ಮತ್ತು ಸಮಸ್ಯೆಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೬

೫೨. ಸಂಗಪ್ಪ ಟಿ.ಎಂ., ರೈತ ಧ್ವನಿ ಎನ್.ಡಿ.ಸುಂದರೇಶ, ಲೋಹಿಯ ಪ್ರಕಾಶನ, ಬೆಂಗಳೂರು, ೧೯೭೩

೫೩. ಸ್ವಾಮಿ ತಡಕಲ ಆರ್.ಎಸ್ ಮತ್ತು ಹಿಪ್ಪರ್ಗಿ ಹಿರೋಳಿ ಎಸ್.ಎಮ್., ಸ್ಮರಣ ಸಂಪುಟ, ಆಳಂದ ತಾಲ್ಲೂಕಿನ ಸಂಪೂರ್ಣ ದರ್ಶನ, ಪ್ರಕಾಶಕರು, ಭಾರತ ಸ್ವಾತಂತ್ರ್ಯ ಸುವರ್ಣ ಮಹೋತ್ಸವದ ಸಮಿತಿ, ಆಳಂದ, ೧೯೯೭

೫೪. ಸಿದ್ಧರಾಮ ಪೊಲೀಸ್ ಪಾಟೀಲ್ ಇ., ಭೂಗರ್ಭ ಜಲ, ಪ್ರಸಾರಾಂಗ, ಗುಲಬರ್ಗಾ, ವಿಶ್ವವಿದ್ಯಾಲಯ, ಗುಲಬರ್ಗಾ, ೧೯೯೬

೫೫. ಸ್ಟೀಪನ್ ಕ್ಯಾಡ್ರಸ್, ಪ್ರಕಾಶ ಸಲ್ಡಾನ್ಹ, ಆಧುನಿಕ ಕರ್ನಾಟಕ, ಪ್ರಕಾಶಕರು, ಚೇತನ್ ಬುಕ್ ಹೌಸ್, ಮೈಸೂರು, ೨೦೦೫

೫೬. ಸೂರ್ಯನಾಥ ಕಾಮತ್., ಕರ್ನಾಟಕದ ಸಂಕ್ಷಿಪ್ತ ಇತಿಹಾಸ, ಜೂಪಿಟರ್ ಬುಕ್ಸ್, ಬೆಂಗಳೂರು, ೧೯೭೩

೫೭. ಸೂರ್ಯನಾಥ ಕಾಮತ್, ಕರ್ನಾಟಕ ಏಕೀಕರಣ ಸಿದ್ಧಿ ಮತ್ತು ಸಾಧನೆ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೭

೫೮. ಸೂರ್ಯನಾಥ ಕಾಮತ್, ವಿಜಯನಗರ ಸಾಮ್ರಾಜ್ಯ, ಅರ್ಚನಾ ಪ್ರಕಾಶನ, ಬೆಂಗಳೂರು, ೧೯೭೩

೫೯. ಹಿರೇಮಠ ಎಸ್.ಎಂ. ಶ್ರೀ ಶರಣ ಬಸವೇಶ್ವರ, ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೧೯೯೪

**ಗ್ಯಾಸೆಟಿಯರುಗಳು, ಸಂಪುಟಗಳು**

೦೧. ಪಾಟೀಲ್ ಎಂ.ಬಿ (ಸಂ)., ಕರ್ನಾಟಕ ರಾಜ್ಯ ಗ್ಯಾಸಟಿಯರ್ ಗುಲಬರ್ಗಾ ಜಿಲ್ಲೆ, ಮು ಗೀತಾಂಜಲಿ ಪ್ರಿಂಟರ್ಸ್, ಬೆಂಗಳೂರು, ೧೯೯೭

೦೨. ಬಸವಾರಾಧ್ಯ ಎನ್., ಕನ್ನಡ ನಿಘಂಟು ಸಂಪುಟ-೭, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೩

೦೩. ಬೋರಲಿಂಗಯ್ಯ ಹಿ.ಚಿ., ಅಭಿವೃದ್ಧಿ ಪಥ ಸುವರ್ಣ ಕರ್ನಾಟಕ ಸಂಪುಟ ೧, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು ೨೦೦೭

೦೪. ವಿಜಯ ಟಿ.ಪಿ. ಪ್ರ.ಸಂ., ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ ಚರಿತ್ರೆ ೪, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧

೦೫. ವೆಂಕಟಸುಬ್ಬಯ್ಯ ಜಿ., ಕನ್ನಡ ನಿಘಂಟು ಸಂಪುಟ ೨, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೭೭

೦೬. ಸೂರ್ಯನಾಥ ಯು.ಕಾಮತ್., ಕರ್ನಾಟಕ ರಾಜ್ಯ ಗ್ಯಾಸಟಿಯರ್ ದಶವಾರ್ಷಿಕ ಪುರವಣಿಕರ್ನಾಟಕ ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು, ೧೯೯೮

೦೭. ಸೂರ್ಯನಾಥ ಯು.ಕಾಮತ್.: ಕರ್ನಾಟಕ ರಾಜ್ಯ ಗ್ಯಾಸಟಿಯರ್ ಭಾಗ ಒಂದು, ಪರಿಶ್ರೀ ಪ್ರಿಂಟರ್ಸ್, ಬೆಂಗಳೂರು, ೧೯೮೪

೦೮. ಸೂರ್ಯನಾಥ ಯು.ಕಾಮತ್.: ಕರ್ನಾಟಕ ರಾಜ್ಯ ಗ್ಯಾಸಟಿಯರ್ ಭಾಗ ಮೂರು, ಮುದ್ರಕರು, ವೆ.ಬಿ.ಸುಬ್ಬಯ್ಯ ಅಂಡ್ ಸನ್ಸ್, ಬೆಂಗಳೂರು, ೧೯೮೬

**ಎಂ.ಫಿಲ್ ಮತ್ತು ಪಿಎಚ್.ಡಿ ಪ್ರಬಂಧಗಳು**

೧. ಜೋತಿ ಸಿ., ಇರ್ವಿನ್ ನಾಲಾ ರೈತ ಚಳುವಳಿ, ಎಂ.ಫಿಲ್ ಪ್ರಬಂಧ ಕರ್ನಾಟಕ ಸಂಘ ಮಂಡ್ಯ, ೨೦೦೮

೨. ಬಸವರಾಜಪ್ಪ ಎಚ್.ಈ., ಚಿತ್ರದುರ್ಗ ಪ್ರದೇಶದ ಭೂಹಿಡುವಳಿಗಳ ಚಾರಿತ್ರಿಕ ಮತ್ತು ಸಾಂಸ್ಕೃತಿಕ ಅಧ್ಯಯನ, ಪಿಎಚ್.ಡಿ ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦

೩. ಮಹೇಶಕುಮಾರ ಎಸ್. ಸಂಕನೂರ, ಗುಲ್ಬರ್ಗಾ ಎಂ.ಎಸ್.ಕೆ.ಮಿಲ್ ಚಾರಿತ್ರಿಕ ಹಾಗೂ ಸಾಂಸ್ಕೃತಿಕ ಅಧ್ಯಯನ, ಎಂ.ಫಿಲ್, ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬

೪. ರೇವಿಣ ಡಿ.ಜಿ., ಕಡಿದಾಳ್ ಮಂಜಪ್ಪ ಮಲೆನಾಡಿನ ಸ್ವಾತಂತ್ರ್ಯೋತ್ತರ ಭೂ ಹೋರಾಟ, ಎಂ.ಫಿಲ್ ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೮

೫. ಶುಭಾ, ಸುರಪುರ ವಿಮೋಚನಾ ಹೋರಾಟ, ಎಂ.ಫಿಲ್ ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬

೬. ಸವಿತ ಬಿ.ಸಿ., ರೈತ ಹೋರಟಗಾರ ಪ್ರೊ.ಎಂ.ಡಿ.ನಂಜುಂಡಸ್ವಾಮಿ, ಎಂ.ಫಿಲ್ ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬

೭. ಸಿದ್ಧನಗೌಡ ಜೆ.ಬಿ., ತುಂಗಭದ್ರಾ ನದಿ ಪರಿಸರದ ಧಾರ್ಮಿಕ ಕ್ಷೇತ್ರಗಳು, ಎಂ.ಫಿಲ್ ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭

## ದಿನಪತ್ರಿಕೆಗಳು

೦೧. ಇಂದಿನಿಂದ ಪಾದಯಾತ್ರೆ ಆರಂಭ, ವಿಜಯ ಕರ್ನಾಟಕ, ೩೦.೧೨.೨೦೦೩ ಪು-೨

೦೨. ಇಂದು ಜೇವರ್ಗಿ ತಹಶೀಲ್ ಕಛೇರಿಗೆ ಮುತ್ತಿಗೆ, ಕಲಬುರ್ಗಿ ವಾಣಿ, ೦೧.೦೧.೨೦೦೪, ಪು-೭

೦೩. ಜೇವರ್ಗಿ: ಜೆಡಿಎಸ್, ಪಾದಯಾತ್ರೆ ಅಂತ್ಯ, ಸತ್ಯಾಗ್ರಹ ಆರಂಭ, ಸಂಯುಕ್ತ ಕರ್ನಾಟಕ, ೦೨.೦೧.೨೦೦೪, ಪು-೨

೦೪. ಪಾದಯಾತ್ರೆ ಮುಕ್ತಾಯ: ಉಪವಾಸ ಸತ್ಯಾಗ್ರಹ ಆರಂಭ, ವಿಜಯ ಕರ್ನಾಟಕ, ೦೨.೦೧.೨೦೦೪, ಪು-೨

೦೫. ಮಹಿಳೆಯರಿಂದ ಉಪವಾಸ ಸತ್ಯಾಗ್ರಹ, ಕನ್ನಡ ಪ್ರಭಾ, ೦೩.೦೧.೨೦೦೪ ಪು-೨

೦೬. ಜೇವರ್ಗಿ: ರೈತರ ಬೇಡಿಕೆಗಳ ಈಡೇರಿಕೆಗೆ ಅನಿರ್ಧಿಷ್ಟ ಧರಣಿ, ಪ್ರಜಾವಾಣಿ, ೦೪.೦೧.೨೦೦೪, ಪು-೪

೦೭. ಜೇವರ್ಗಿ: ರೈತರ ಬೇಡಿಕೆ ಈಡೆರಿಕೆಗೆ ಅಗ್ರಹಿಸಿ ೭ ರಿಂದ ಅನಿರ್ಧಿಷ್ಟ ಧರಣಿ, ಸಂಧ್ಯಾಕಾಲ, ೦೪.೦೧.೨೦೦೪, ಪು-೧

೦೮. ಸತ್ಯಾಗ್ರಹ ಸ್ಥಳಕ್ಕೆ ಅಧಿಕಾರಿಗಳ ಭೇಟಿ, ವಿಜಯ ಕರ್ನಾಟಕ, ೦೪.೦೧.೨೦೦೪, ಪು-೨

೦೯. ಜೇವರ್ಗಿ: ತಹಸೀಲ್ ಕಚೇರಿಗೆ ನುಗ್ಗಿದ ಎತ್ತು ಬಂಡಿ, ಪರಿಸ್ಥಿತಿ ಉದ್ರಿಕ್ತ, ಪ್ರಜಾವಾಣಿ, ೦೮.೦೧.೨೦೦೪, ಪು-೬

೧೦. ರೈತರನ್ನು ಕಡಗಣಿಸಿದರೆ ರಕ್ತಪಾತವಾದೀತು: ಜಾ.ದಳ ಎಚ್ಚರಿಕೆ, ವಿಜಯ ಕರ್ನಾಟಕ, ೦೮.೦೧.೨೦೦೪, ಪು-೫

೧೧. ಜೇವರ್ಗಿ: ಜನತಾದಳ (ಜಾ) ಧರಣಿ ವಾಪಸ್, ಸಂಯುಕ್ತ ಕರ್ನಾಟಕ, ೦೯.೦೧.೨೦೦೪, ಪು-೩

೧೨. ರೈತರ ಸಮಸ್ಯೆ, ಖರ್ಗೆ, ಧರ್ಮ ಭಿನ್ನ ನಿಲವು, ಪ್ರಜಾವಾಣಿ, ೧೧.೦೧.೨೦೦೪, ಪು-೧-೧೦

೧೩. ಜೇವರ್ಗಿ ರೈತರ ಹೋರಾಟ: ೨೧ ರಿಂದ ಅಮರಣ ಉಪವಾಸ, ವಿಜಯ ಕರ್ನಾಟಕ, ೧೩.೦೧.೨೦೦೪, ಪು-೨

೧೪. ನೆನೆಗುದಿಗೆ ಬಿದ್ದ ಮಲ್ಲಾಬಾದ್ ಏತ ನೀರಾವರಿ ಯೋಜನೆ ಜಾರಿ ಎಂದು, ವಿಜಯ ಕರ್ನಾಟಕ, ೧೭.೦೧.೨೦೦೪, ಪು-೨

೧೫. ಜೇವರ್ಗಿ : ಜೆಡಿ(ಎಸ್) ಅಮರಣ ಸತ್ಯಾಗ್ರಹ ಆರಂಭ, ಸಂಜೆವಾಣಿ, ೨೦.೦೧.೨೦೦೪, ಪು-೪

೧೬. ಆನೇ ದಿನ ಧರಣಿ: ನಾಳೆ ಜೇವರ್ಗಿಗೆ ಸಿದ್ರಾಮಯ್ಯ, ವಿಜಯಕರ್ನಾಟಕ, ೨೮.೦೧.೨೦೦೪, ಪು-೩

೧೭. ಮಲ್ಲಾಬಾದ ಏತ ನೀರಾವರಿ ತಾಂತ್ರಿಕ ಸಮೀಕ್ಷೆಗೆ ಸೂಚನೆ, ಸಂಯುಕ್ತ ಕರ್ನಾಟಕ, ೩೧.೦೧.೨೦೦೪, ಪು-೨

೧೮. ಫೆಬ್ರವರಿ ೩ರಂದು ಮುಖ್ಯಮಂತ್ರಿ ಜೇವರ್ಗಿ ಪ್ರವಾಸಕ್ಕೆ ಕಡು ವಿರೋಧ, ಕನ್ನಡ ಪ್ರಭಾ, ೩೧.೦೧.೨೦೦೪, ಪು-೨

೧೯. ಮುಖ್ಯಮಂತ್ರಿ ಕಾರ್ಯಕ್ರಮಕ್ಕೆ ಜೇವರ್ಗಿ ಜೆಡಿಎಸ್ ವಿರೋಧ, ಸಂಯುಕ್ತ ಕರ್ನಾಟಕ, ೩೧.೦೧.೨೦೦೪, ಪು-೩

೨೦. ಮುಖ್ಯಮಂತ್ರಿ ಕಾರ್ಯಕ್ರಮಕ್ಕೆ ಪ್ರತಿಭಟನೆ, ಪ್ರಜಾವಾಣಿ, ೩೧.೦೧.೨೦೦೪, ಪು-೨

೨೧. ಜಿಲ್ಲಾಧಿಕಾರಿ ಭರವಸೆ ಅಮರಣ ಉಪವಾಸ ಅಂತ್ಯ, ಪ್ರಜಾವಾಣಿ, ೦೧.೦೨.೨೦೦೪, ಪು-೪

೨೨. ವಿದ್ಯುತ್ ಮೀಟರ್ ಕಿತ್ತು ರೈತರ ಪ್ರತಿಭಟನೆ, ಪ್ರಜಾವಾಣಿ, ೦೧.೧೦.೨೦೦೪, ಪು-೨

೨೩. ೩೦೦ ಮೀಟರ್ ವಾಪಸ್, ವಿಜಯ ಕರ್ನಾಟಕ, ೦೧.೧೦.೨೦೦೪, ಪು-೨

೨೪. ಜೇವರ್ಗಿ: ಪ್ರಾಂತ ರೈತ ಸಂಘದ ಧರಣಿ, ಸಂಯುಕ್ತ ಕರ್ನಾಟಕ, ೦೧.೧೦.೨೦೦೪, ಪು-೩

೨೫. ಮೀಟರ್ ಕಿತ್ತು ಬಂಡಿಗಳೊಂದಿಗೆ ರೈತರಿಂದ ವಿನೂತನ ಪ್ರತಿಭಟನೆ, ಕ್ರಾಂತಿ, ೦೨.೧೦.೨೦೦೪, ಪು-೪

೨೬. ಜೇವರ್ಗಿ: ಪಟ್ಟಣದಲ್ಲಿ ತಹಶೀಲ್‌ಗೆ ರೈತರ ಮುತ್ತಿಗೆ, ವಿಜಯ ಕರ್ನಾಟಕ, ೦೭.೦೫.೨೦೦೫, ಪು-೩

೨೭. ಜೇವರ್ಗಿ: ಬೇಡಿಕೆ ಈಡೇರಿಕೆಗೆ ಆಗ್ರಹಿಸಿ ರೈತರ ಮನವಿ, ಸಂಯುಕ್ತ ಕರ್ನಾಟಕ, ೦೭.೦೫.೨೦೦೫, ಪು-೩

೨೮. ರೈತ ಸಂಘದಿಂದ ಮುತ್ತಿಗೆ, ಉಷಾ ಕಿರಣ, ೦೫.೦೫.೨೦೦೫, ಪು-೨

೨೯. ನಾಳೆ ಜೇವರ್ಗಿ ತಹಸೀಲ್ ಕಚೇರಿಗೆ ಮುತ್ತಿಗೆ, ಸಂಜೆವಾಣಿ, ೦೫.೦೫.೨೦೦೫, ಪು-೨

೩೦. ನಾಳೆ ಜೇವರ್ಗಿ ತಹಸೀಲ್ ಕಛೇರಿಗೆ ರೈತರ ಮುತ್ತಿಗೆ, ಕ್ರಾಂತಿ, ೦೫.೦೫.೨೦೦೫, ಪು-೨

೩೧. ನಾಳೆ ಜೇವರ್ಗಿ ತಹಸೀಲ್ ಕಛೇರಿಗೆ ಮುತ್ತಿಗೆ, ಸಂಯುಕ್ತ ಕರ್ನಾಟಕ, ೦೫.೦೫.೨೦೦೫, ಪು-೩

೩೨. ಪ್ರಾಂತ ರೈತ ಸಂಘದಿಂದ ತಹಶೀಲ ಕಚೇರಿಗೆ ಮುತ್ತಿಗೆ, ಸಂಜೆವಾಣಿ, ೦೮.೦೮.೨೦೦೫, ಪು-೩

೩೩. ಜೇವರ್ಗಿ ತಹಸೀಲ ಕಚೇರಿ ಎದುರು ಧರಣಿ, ಪ್ರಜಾವಾಣಿ, ೧೭.೧೦.೨೦೦೬, ಪು-೨

೩೪. ಪ್ರಾಂತ ರೈತ ಸಂಘದಿಂದ ತಹಸೀಲ್ ಕಚೇರಿಗೆ ಮುತ್ತಿಗೆ, ಸಂಯುಕ್ತ ಕರ್ನಾಟಕ, ೧೮.೧೦.೨೦೦೬, ಪು-೨

೩೫. ಧರಂಗೆ ರೈತರಿಂದ ಮುತ್ತಿಗೆ, ವಿಜಯ ಕರ್ನಾಟಕ, ೨೮.೧೦.೨೦೦೬, ಪು-೪

೩೬. ಕಲಬುರ್ಗಿ ಲೋಕಾಯುಕ್ತರಿಂದ ದೂರುಗಳ ವಿಚಾರಣೆ, ವಿಜಯ ಕರ್ನಾಟಕ, ೧೦.೦೧.೨೦೦೬, ಪು-೪

೩೭. ರೈತ ಸಂಘದ ಪ್ರತಿಭಟನೆ, ವಿಜಯ ಕರ್ನಾಟಕ, ೨೯.೦೮.೨೦೦೭, ಪು-೩

೩೮. ರೈತರ ಒಗಟ್ಟಿನಲ್ಲಿ ಬಲ ಇದೆ. ಚನ್ನಪ್ಪ ಆನೆಗುಂದಿ, ಕ್ರಾಂತಿ, ೦೭.೧೦.೨೦೦೭, ಪು-೩

೩೯. ಕಬ್ಬು ಪರಿಹಾರಕ್ಕಾಗಿ ಗುಲಬರ್ಗಾ ಜಿಲ್ಲೆಗೆ ೧೩ ಕೋಟಿ ರೂ.ಗಳು ಪಾಂಡೆ, ಕ್ರಾಂತಿ, ೦೭.೧೦.೨೦೦೭, ಪು-೩

೪೦. ನುರಿಸದಿರುವ ಕಬ್ಬಿಗೆ ೧೩ ಕೋಟಿ ಪರಿಹಾರ ಬಿಡುಗಡೆ, ಸಂಯುಕ್ತ ಕರ್ನಾಟಕ, ೦೭.೧೦.೨೦೦೭, ಪು-೩

೪೧. ಜೇವರ್ಗಿ ಮತ್ತು ಚಿಂಚೋಳಿಯಲ್ಲಿ ರೈತರ ಪ್ರತಿಭಟನೆ, ವಿಜಯ ಕರ್ನಾಟಕ, ೧೮.೧೧.೨೦೦೭, ಪು-೩

೪೨. ಜೇವರ್ಗಿ ರೈತರಿಂದ ೧೪ರಂದು ಗುಲ್ಬರ್ಗಾ ಚಲೋ ಹೋರಾಟ, ಕನ್ನಡ ಪ್ರಭಾ, ೧೧.೦೭.೨೦೦೮, ಪು-೨

೪೩. ಸಾಲ ನಿರಾಕರಣೆ ರೈತರ ಪ್ರತಿಭಟನೆ, ಕನ್ನಡ ಪ್ರಭಾ, ೦೫.೧೨.೨೦೦೮, ಪು-೨

೪೪. ಮೃತ ರೈತನ ಕುಟುಂಬಕ್ಕೆ ಪರಿಹಾರ ನೀಡಲು ಆಗ್ರಹಸಿ, ಸಂಜೆವಾಣಿ, ೦೫.೧೨.೨೦೦೮, ಪು-೩

೪೫. ಸಾಲದ ಬಾಧೆ ರೈತ ಆತ್ಮಹತ್ಯ, ಪ್ರಜಾವಾಣಿ, ೧೬.೧೨.೨೦೦೮, ಪು-೨

೪೬. ಮೃತನ ಕುಟುಂಬಕ್ಕೆ ಪರಿಹಾರ ನೀಡಲು ಆಗ್ರಹಸಿ, ಸುದ್ದಿಮೂಲ, ೧೬.೧೨.೨೦೦೮, ಪು-೪

೪೭. ಎರಡು ಕಡೆ ರಸ್ತೆ ತಡೆದು ಪ್ರತಿಭಟನೆ, ಪ್ರಜಾವಾಣಿ, ೧೨.೦೮.೨೦೦೯, ಪು-೪

೪೮. ಬರ ರಸ್ತೆಗೆ ಬಂದ ಎತ್ತು ಬಂಡಿಗಳು ಸಂಚಾರ ಸ್ಥಗಿತ, ವಿಜಯ ಕರ್ನಾಟಕ, ೧೨.೦೮.೨೦೦೯, ಪು-೪

೪೯. ರಾಜ್ಯ ಹೆದ್ದಾರಿ ಬಳಿ ರಸ್ತೆ ತಡೆ, ಸಂಜೆವಾಣಿ, ೧೨.೦೮.೨೦೦೯, ಪು-೮

೫೦. ಎತ್ತು ಬಂಡಿಗಳೊಂದಿಗೆ ರಾಜ್ಯ ಹೆದ್ದಾರಿ ಬಂದ್, ಕ್ರಾಂತಿ, ೧೨.೦೮.೨೦೦೯, ಪು-೬

೫೧. ಬರಗಾಲ ಘೋಷಣೆಗಾಗಿ ಜೇವರ್ಗಿಯಲ್ಲಿ ಧರಣಿ, ವಿಜಯ ಕರ್ನಾಟಕ, ೧೭.೦೮.೨೦೦೯,ಪು-೩

೫೨. ಬೆಳೆ ವಿಮೆ ಜಾರಿಗೆ ಆಗ್ರಹಿಸಿಧರಣಿ, ಸಂಜೆವಾಣಿ, ೩೦.೦೮.೨೦೦೯, ಪು-೩

೫೩. ಮುಂಗಾರು ಬೆಳೆ ವಿಮೆ ಜಾರಿಗೆ ಆಗ್ರಹಿಸಿ ಇಂದು ರೈತರ ಧರಣಿ, ಕ್ರಾಂತಿ ೩೧.೦೮.೨೦೦೯, ಪು-೨

೫೪. ಗುಲಬರ್ಗಾ ಸಚಿವ ಸಂಪುಟದ ಸಭೆ ನಿರ್ಣಯಗಳು ನೆನೆಗುದಿಗೆ ಕೇದಾರಲಿಂಗಯ್ಯ ಅತೃಪ್ತಿ, ಸುದ್ಧಿ ಮೂಲ, ೧೨.೦೮.೨೦೧೦, ಪು-೪

# ಮಾಹಿತಿ ಕೊಟ್ಟವರ ವಿವರ

| ಕ್ರ.ಸಂ | ಹೆಸರು | ವಯಸ್ಸು | ವೃತ್ತಿ | ಜಾತಿ | ವಿಳಾಸ |
|---|---|---|---|---|---|
| ೦೧. | ಕೇದಾರಲಿಂಗಯ್ಯ ಹಿರೇಮಠ | ೬೦ | ರಾಜಕಾರಣ, ರೈತ ಮುಖಂಡ | ಲಿಂಗಾಯತ | ಗೋಧತಾಯಿ ನಗರ ಗುಲಬರ್ಗಾ |
| ೦೨. | ಸುರೇಶ ಸುರಪುರ | ೪೫ | ಕೃಷಿ | ಲಿಂಗಾಯತ | ಸುಂಬಡ, ಜೇವರ್ಗಿ |
| ೦೩. | ಮಾರುತಿ ಮಾನ್ಪಡೆ | ೬೦ | ಕ.ಪ್ರಾಂತ ರೈತ ಸಂಘದ ಜಿಲ್ಲಾ ಅಧ್ಯಕ್ಷರು | ಎಸ್.ಸಿ | ಗುಲಬರ್ಗಾ ಸಿಟಿ |
| ೦೪. | ಗೌರಮ್ಮ ಪಿ. ಪಾಟೀಲ್ | ೪೦ | ಕ.ಪ್ರಾಂತ ರೈತ ಸಂಘದ ಜಿಲ್ಲಾ ಕಾರ್ಯದರ್ಶಿ | ಲಿಂಗಾಯತ | ಕೆರಾ ಬೋಸಗಾ, ಗುಲಬರ್ಗಾ |
| ೦೫. | ಸುಭಾಸ ಎಚ್.ಹೊಸಮನಿ | ೩೫ | ವಿ.ಆರ್.ಡಬ್ಲ್ಯೂ | ಕುರುಬ | ವಿದ್ಯನಗರ, ಜೇವರ್ಗಿ |
| ೦೬. | ಚಂದ್ರಶೇಖರ ಎಂ.ಹೊಸಮನಿ | ೩೭ | ಕೃಷಿ | ರೆಡ್ಡಿ | ಮಲ್ಲಾಬಾದ, ಜೇವರ್ಗಿ |
| ೦೭. | ಹಳೇಮ್ಮ ಎಸ್.ಚಿಕ್ಕಗೌಡರ | ೩೪ | ಕೃಷಿ | ರೆಡ್ಡಿ | ಮಲ್ಲಾಬಾದ, ಜೇವರ್ಗಿ |
| ೦೮. | ಶರಣಪ್ಪ ಎಸ್.ಸಲಗಾರ | ೪೫ | ಕೃಷಿ | ಲಿಂಗಾಯತ | ಸೋನ್ನಾ, ಜೇವರ್ಗಿ |
| ೦೯. | ಮೈಹಿಬೂಬ ಪಟೇಲ್ | ೨೯ | ವ್ಯಾಪಾರ | ಮುಸ್ಲಿಂ | ಕರಿಕೋಟಾ, ಗುಲಬರ್ಗಾ |
| ೧೦. | ಶರಬಸಪ್ಪ | ೩೨ | ಟಿ.ಪಿ.ಸದಸ್ಯ | ಲಿಂಗಾಯತ | ರಟಕಲ್ಲ, ಚಿಂಚೋಳಿ |
| ೧೧. | ಶ್ರೀಮಂತ ಬಿರೆದಾರ | ೩೮ | ಕೃಷಿ | ಲಿಂಗಾಯತ | ಬಸವನಗರ, ಅಫಜಲಪುರ |

| | | | | | |
|---|---|---|---|---|---|
| ೧೨. | ಪಾಂಡುರಂಗ | ೩೦ | ಕೃಷಿ | ಲಿಂಗಾಯತ | ಆಳಂದ |
| ೧೩. | ಸಿದ್ಧರಾಮ | ೨೮ | ಕೃಷಿ | ಕುರುಬ | ಹರವಾಳ, ಜೇವರ್ಗಿ |
| ೧೪. | ಪರುಶುರಾಮ | ೩೦ | ಕೃಷಿ | ಮಾದಿಗ | ಶಖಾಪೂರ, ಜೇವರ್ಗಿ |
| ೧೫. | ರವಿ | ೨೯ | ಕೃಷಿ | ಲಿಂಗಾಯತ | ಫರತ್ತಾಹಬಾದ್, ಅಪಜಲಪುರ |
| ೧೬. | ಬಸಮ್ಮ ಗುತ್ತೇದಾರ | ೩೨ | ಅಂಗನವಾಡಿ ಕಾರ್ಯಕರ್ತೆ | ಈಳಿಗೇರ | ಅಫಜಲಪುರ |
| ೧೭. | ರವಿ. ನಾಟಕಾರ | ೨೮ | ಕೃಷಿ | ಕಂಬಲಿಗ | ಕುರಿಕೋಟಾ, ಗುಲಬರ್ಗಾ |
| ೧೮. | ವಿಠಲಪೂಜಾರಿ | ೩೦ | ಕೂಲಿ | ಕಂಬಲಿಗ | ಇಂದಿರಾನಗರ, ಗುಲಬರ್ಗಾ |
| ೧೯. | ಶಂಕರಲಿಂಗ | ೨೯ | ಕೃಷಿ | ಕಂಬಲಿಗ | ಹರವಾಳ, ಜೇವರ್ಗಿ |
| ೨೦. | ಭೀಮಾಶಂಕರ ವಿಭೂತಿ | ೪೫ | ಕೃಷಿ | ಲಿಂಗಾಯತ | ಮಂದೇವಾಲ, ಜೇವರ್ಗಿ |
| ೨೧. | ಗುಂಡಯ್ಯ ಸ್ಥಾವರ ಮಠ | ೪೨ | ಕೃಷಿ | ಸ್ವಾಮಿ ಲಿಂಗಾಯತ | ಜವಳಗಿ, ಜೇವರ್ಗಿ |
| ೨೨. | ತಮ್ಮಣ್ಣ ಬಾಗೇವಾಡಿ | ೩೮ | ಕೃಷಿ | ಕುರುಬ | ಕಲ್ಲಹಂಗರಗಾ, ಜೇವರ್ಗಿ |
| ೨೩. | ಚಂದ್ರಶೇಖರ ಚವ್ಹಾಣ | ೩೫ | ಕೃಷಿ | ಲಂಬಾಣಿ | ಜೇವರ್ಗಿ |
| ೨೪. | ಅಶೋಕ ಸಾಹು,ಗೋಗಿ | ೫೦ | ಕೃಷಿ | ಲಿಂಗಾಯತ | ಜೇವರ್ಗಿ |
| ೨೫. | ಭೀಮರಾಯನಗೌಡ ಬೆಕ್ಕಿನಾಳ | ೫೦ | ಕೃಷಿ | ರಡ್ಡಿ | ವಡಗೇರಿ, ಜೇವರ್ಗಿ |
| ೨೬. | ಬಾಪುಗೌಡ ಬಿರಾದಾರ | ೫೦ | ಕೃಷಿ | ರಡ್ಡಿ | ದೇಸಣಗಿ, ಜೇವರ್ಗಿ |

| | | | | | |
|---|---|---|---|---|---|
| ೨೭. ಚೆನ್ನಬಸಪ್ಪ ಬೂದಿಹಾಳ | ೪೮ | ಕೃಷಿ | ಲಿಂಗಾಯತ | ಬಳುಂಡಗಿ, ಜೇವರ್ಗಿ |
| ೨೮. ಸಿದ್ರಾಮಪ್ಪಗೌಡ ಪಾಟೀಲ | ೪೫ | ಕೃಷಿ | ರಡ್ಡಿ | ಸಿದ್ದನಾಳ್, ಜೇವರ್ಗಿ |
| ೨೯. ನಾನಾಗೌಡ ಪಾಟೀಲ | ೫೦ | ಕೃಷಿ | ರಡ್ಡಿ | ಲಕಣಾಪೂರ, ಜೇವರ್ಗಿ |
| ೩೦. ಬಸವರಾಜ ಹುಗ್ಗಿ | ೪೬ | ಕೃಷಿ | ಲಿಂಗಾಯತ | ಜೇವರ್ಗಿನಗರ |
| ೩೧. ಶರಣಪ್ಪ ದೊಡ್ಡಮನಿ | ೫೦ | ಕೃಷಿ | ಮಾದಿಗ | ಕಾಚಾಪುರ, ಜೇವರ್ಗಿ |
| ೩೨. ಅಲ್ಲಿಸಾಬ | ೪೪ | ಕೃಷಿ | ಮುಸ್ಲಿಂ | ವಡಗೇರಿ, ಜೇವರ್ಗಿ |
| ೩೩. ಕರಬಸಯ್ಯಸ್ವಾಮಿಗಳು | ೫೫ | ಕೃಷಿ | ಸ್ವಾಮಿ ಲಿಂಗಾಯತ | ಅರಳಗುಂಡಗಿ, ಜೇವರ್ಗಿ |
| ೩೪. ಶಿವಲಿಂಗಪ್ಪ ಪಿರಶೆಟ್ಟಿ | ೫೦ | ಕೃಷಿ | ಲಿಂಗಾಯತ | ರಡ್ಡಿವಾಡಗಿ, ಜೇವರ್ಗಿ |
| ೩೫. ಅಲ್ಲಾಭಕ್ಷ ಭಾಗಾವಾನ | ೫೦ | ವ್ಯಾಪಾರ | ಮುಸ್ಲಿಂ | ಜೇವರ್ಗಿ |
| ೩೬. ಲಿಂಗಯ್ಯ ಹಿರೇಮಠ | ೪೧ | ಕೃಷಿ | ಲಿಂಗಾಯತ | ಆಂದೋಲಾ, ಜೇವರ್ಗಿ |
| ೩೭. ರಮೇಶ, ಯಕ್ಕಾಪೂರ | ೭೦ | ರಾಜಕೀಯ ಮುಖಂಡರು | ಲಿಂಗಾಯತ | ಬಡೇಪೂರ ಕಾಲೋನಿ, ಗುಲಬರ್ಗಾ |
| ೩೮. ರೇವಣಸಿದ್ದಪ್ಪ | ೫೦ | ಮೇಸ್ತ್ರಿ ಹಾಲೇಗಾರ | ಹೊಲೆಯ | ಅಮರ್ಜಾ ಕ್ಯಾಂಪ್ ಆಳಂದ |
| ೩೯. ವಿಶ್ವನಾಥ ಪಾಟೀಲ್ ಹೆಬ್ಬಾಳ | ೭೦ | ಮಾಜಿಶಾಸಕ | ರಡ್ಡಿ | ಸೆಂಟ್‌ಮೇರಿ ಶಾಲೆ, ಎದುರುಗಡೆ ಗುಲಬರ್ಗಾ |
| ೪೦. ಶರಣಗೌಡ ಪಾಟೀಲ | ೪೦ | ಕೃಷಿ | ರೆಡ್ಡಿ | ಶಿವಪೂರ, ಜೇವರ್ಗಿ |
| ೪೧. ದೇವಿಂದ್ರಪ್ಪ ಹುಜರತ್ತಿ | ೭೨ | ಕೃಷಿ | ಬೇಡರ | ಶಿವಪೂರ, ಜೇವರ್ಗಿ |
| ೪೨. ಸಾಯಬಣ್ಣಾ ಹುಜರತ್ತಿ | ೫೨ | ಕೃಷಿ | ಬೇಡರ | ಶಿವಪೂರ, ಜೇವರ್ಗಿ |

| | | | | | |
|---|---|---|---|---|---|
| ೪೩. | ಅಮೃತರಡ್ಡಿ ದೇಸಾಯಿ | ೫೮ | ಕೃಷಿ | ರಡ್ಡಿ | ಮಲ್ಲಾಬಾದ, ಜೇವರ್ಗಿ |
| ೪೪. | ನಿಂಗಪ್ಪ ದೊರಿ | ೫೨ | ಕೃಷಿ | ಬೇಡರ | ಮಲ್ಲಾಬಾದ, ಜೇವರ್ಗಿ |
| ೪೫. | ಬಸಪ್ಪ ಮೈಲಿ | ೫೫ | ಕೃಷಿ | ಹೊಲೆಯ | ಮೋಘಾ, ಚಿಂಚೋಳಿ |
| ೪೬. | ಅಣ್ಣಪ್ಪ ಮೈಲಿ | ೫೦ | ಕೃಷಿ | ಹೊಲೆಯ | ಮೋಘಾ, ಚಿಂಚೋಳಿ |
| ೪೭. | ಶಿವಪುತ್ರಪ್ಪ ಹೊಸಗೌಡರು | ೪೮ | ಕೃಷಿ | ಲಿಂಗಾಯತ | ಮೋಘಾ, ಚಿಂಚೋಳಿ |
| ೪೮. | ಗೌವುಸ್ ಪಟೇಲ | ೪೮ | ಕೃಷಿ | ಮುಸ್ಲಿಂ | ಮೋಘಾ, ಚಿಂಚೋಳಿ |
| ೪೯. | ಜಗಪ್ಪ ಬಾಸಾ | ೪೯ | ಕೃಷಿ | ಉಪ್ಪಾರ | ಮೋಘಾ, ಚಿಂಚೋಳಿ |
| ೫೦. | ರಾಮಲಿಂಗರೆಡ್ಡಿ ದೇಸಮುಖಿ | ೪೫ | ಕೃಷಿ | ರಡ್ಡಿ | ಕೂಡ್ಲಿ, ಚಿಂಚೋಳಿ |
| ೫೧. | ಭೀಮರಾಯ ಹಳಿಮನಿ | ೫೨ | ಕೃಷಿ | | ಮಲ್ಲಾ ಕೆ, ಜೇವರ್ಗಿ |
| ೫೨. | ರುದ್ರಮುನಿ ಸ್ವಾಮಿಗಳ | ೪೨ | ಕೃಷಿ | ಸ್ವಾಮಿ ಲಿಂಗಾಯ | ಗಂವ್ಹಾರ್, ಜೇವರ್ಗಿ |
| ೫೩. | ಷಣ್ಮುಖಪ್ಪಾ ಹಿರೇಗೌಡ | ೬೫ | ಕೃಷಿ | ಲಿಂಗಾಯತ | ಜೇವರ್ಗಿ |
| ೫೪. | ಮಹಿಬೂಬ್ ಪಟೇಲ್ | ೪೫ | ಕೃಷಿ | ಮುಸ್ಲಿಂ | ಯಾಳವಾರ, ಜೇವರ್ಗಿ |
| ೫೫. | ಶಿವಾನಂದ ದ್ಯಾಮಗೊಂಡ | ೪೬ | ಕೃಷಿ | | ಕೆಲ್ಲೂರ ಕೆ, ಜೇವರ್ಗಿ |
| ೫೬. | ರಹೇಮಾನ ಪಟೇಲ್ | ೪೦ | ವ್ಯಾಪಾರ | ಮುಸ್ಲಿಂ | ಜೇವರ್ಗಿ |
| ೫೭. | ಮಲ್ಲಿಕಾರ್ಜುನ ಪಾಟೀಲು | ೪೫ | ಕೃಷಿ | ಲಿಂಗಾಯತ | ಬಳಬಟ್ಟಿ, ಜೇವರ್ಗಿ |
| ೫೮. | ವಿನೋದ ಕುಲಕರ್ಣಿ | ೩೮ | ಕೃಷಿ | ಬ್ರಾಹ್ಮಣ | ಸಾಥಖೇಡ, ಜೇವರ್ಗಿ |

| | | | | | |
|---|---|---|---|---|---|
| ೫೯. | ಮತ್ತುಮಜ | ೪೨ | ಕೃಷಿ | ಮುಸ್ಲಿಂ | ಇಜೇರಿ, ಜೇವರ್ಗಿ |
| ೬೦. | ಈರಣ್ಣ | ೪೧ | ಕೃಷಿ | | ಇಜೇರಿ, ಜೇವರ್ಗಿ |
| ೬೧. | ನಾಗಪ್ಪ ಗೌತಮ್ಮ | ೩೫ | ಕೃಷಿ | ಹೊಲೆಯ | ನಿಢಗುಂದೆ, ಚಿಂಚೋಳಿ |
| ೬೨. | ಹಣಮಂತ ಮುಸ್ತಪಳ್ಳಿ | ೩೨ | ಕೃಷಿ | ಕಂಬಲಿಗ | ಕಲ್ಲೂರು ರೋಡ, ಚಿಂಚೋಳಿ |
| ೬೩. | ಸುಭಾಸ ಪೂಜಾರಿ | ೪೫ | ಕೃಷಿ | ಕುರುಬ | ಪಸ್ತಾಪುರ, ಚಿಂಚೋಳಿ |
| ೬೪. | ಮಾಣಿಕ ಚವ್ಹಾಣ | ೪೦ | ಕೃಷಿ | ಲಂಬಾಣಿ | ಮೋಗಾತಾಂಡ, ಚಿಂಚೋಳಿ |
| ೬೫. | ಶಾಂತಮಲ್ಲವಾಡೇಕಾರ | ೫೦ | ಕೃಷಿ | ಹೊಲೆಯ | ಅರ್ಜುಣಗಿ, ಚಿಂಚೋಳಿ |
| ೬೬. | ಸಾಯಬಣ್ಣ ಗುಮಣ್ಣ | ೫೫ | ಕೃಷಿ | ಹೊಲೆಯ | ಕೋಡದೂರ, ಚಿತ್ತಾಪುರ |
| ೬೭. | ಹುಚ್ಚಪ್ಪ ಗಂಗಪ್ಪಗೋಳ | ೫೩ | ಕೃಷಿ | ಹೊಲೆಯ | ಕೋಡದೂರ, ಚಿತ್ತಾಪುರ |
| ೬೮. | ಅಪ್ಪರಾವ್ ಸಾಹುಕಾರ | ೪೫ | ಕೃಷಿ | ಲಿಂಗಾಯ | ಕೋಡದೂರ, ಚಿತ್ತಾಪುರ |
| ೬೯. | ಮಸ್ತಾನಪ್ಪ ಮಲಕಾರ | ೫೦ | ಕೃಷಿ | ಹೊಲೆಯ | ಸಾಲಹಳ್ಳಿ, ಚಿತ್ತಾಪುರ |
| ೭೦. | ಮಹಾಂತಯ್ಯಸ್ವಾಮಿ | ೬೫ | ವ್ಯಾಪಾರ | ಸ್ವಾಮಿ ಲಿಂಗಾಯತ | ಅಂಬರಖೇಡ, ಜೇವರ್ಗಿ |
| ೭೧. | ನೀಲಕಂಠರಾವ್ ಪಾಟೀಲ್ | ೫೦ | ಕೃಷಿ | ಲಿಂಗಾಯತ | ರೋಮಗುಡ್ಡ, ಚಿಂಚೋಳಿ |
| ೭೨. | ಗಂಗಮ್ಮ ಬಿರೆದಾರ | ೫೫ | ಅಂಗನವಾಡಿ ಕಾರ್ಯಕರ್ತೆ | ಲಿಂಗಾಯತ | ಯತ್ನಾಳ, ಜೇವರ್ಗಿ |
| ೭೩. | ಇಮಾಮಪುದಿ | ೪೦ | ಕೃಷಿ | ಮುಸ್ಲಿಂ | ಹರವಾಳ, ಜೇವರ್ಗಿ |
| ೭೪. | ಯಂಕಮ್ಮ | ೩೫ | ಕೃಷಿ | ಬೇಡರ | ಔರಾದ, ಜೇವರ್ಗಿ |

| | | | | | |
|---|---|---|---|---|---|
| ೭೫. | ದ್ರೌಪತಿ | ೪೦ | ಕೃಷಿ | ಮಾದರ | ಶಖಾಪೂರ, ಜೇವರ್ಗಿ |
| ೭೬. | ಗಂಗಮ್ಮ | ೩೯ | ಕೃಷಿ | ಕುರುಬ | ರೇವನೂರ, ಜೇವರ್ಗಿ |
| ೭೭. | ಗುಂಡಬಾಯಿ | ೪೫ | ಕೃಷಿ | ಲಂಬಾಣಿ | ರೇವನೂರ, ಜೇವರ್ಗಿ |
| ೭೮. | ಭೀಮಶೆಟ್ಟಿ | ೪೮ | ಕೃಷಿ ರೈತ ಮುಖಂಡ | ಲಿಂಗಾಯತ | ಚಿಂಚೋಳಿ |
| ೭೯. | ಶರಣಬಸಪ್ಪ ಮಮಶೆಟ್ಟಿ | ೩೫ | ರೈತ ಮುಖಂಡ | ಲಿಂಗಾಯತ | ಚಿಂಚೋಳಿ |
| ೮೦. | ಸೌಭಾಗ್ಯಮ್ಮ | ೪೦ | ಕೃಷಿ | ಲಿಂಗಾಯತ | ಚಿಂಚೋಳಿ |
| ೮೧. | ನಾಗೇಂದ್ರಮ್ಮ ಗುತ್ತೆದಾರ | ೩೯ | ರಾಜ್ಯ ಪ್ರಾಂತ ರೈತ ಸಂಘದ ಸಂಚಾಲಕರು | ಇಂಗಿಯರ | ವಿಕೆ.ಸಲಗಾರ ಆಳಂದ |
| ೮೨. | ಶಾಂತ ಎಸ್. ಕಂಠಿ | ೪೨ | ಅಂಗನವಾಡಿ ಕಾರ್ಯಕರ್ತೆ | | ಅಫಜಲಪುರ |
| ೮೩. | ಕಲ್ಪನಾ | ೨೮ | ಬಿಸಿಯೂಟ ಅಕ್ಷರ ದಾಮ ಸಮಿತಿ ಜಿಲ್ಲಾ ಅಧ್ಯಕ್ಷರು | | ಯಾದಗಿರಿ |
| ೮೪. | ಮಹಾದೇವಿ | ೫೩ | ಅಂಗನವಾಡಿ ನೌಕರ ಸಂಘದ ಕಾರ್ಯದರ್ಶಿ | ಲಿಂಗಾಯತ | ಪೋಲಹಳ್ಳಿ, ಚಿಂಚೋಳಿ |
| ೮೫. | ಪ್ರಕಾಶ ಪಾಟೀಲ್ | ೪೫ | ಪ್ರಾಂತ ರೈತ ಸಂಘದ ತಾಲೂಕು ಖಜಾಂಚಿ | ಲಿಂಗಾಯತ | ಕೆರಾಬೊಸಗಾ, ಗುಲಬರ್ಗಾ |
| ೮೬. | ಇಂದುಮತಿ | ೩೭ | ಅಂಗನವಾಡಿ ಕಾರ್ಯಕರ್ತೆ, ತಾಲೂಕು ಕಾರ್ಯದರ್ಶಿ | ಎಸ್.ಸಿ | ಗುಲಬರ್ಗಾ |

# ಕರ್ನಾಟಕ ರಾಜ್ಯ



# ಅವಿಭಜಿತ ಗುಲಬರ್ಗಾ ಜಿಲ್ಲೆ



# ಗುಲಬರ್ಗಾ ಜಿಲ್ಲೆ


ಬೀದರ ಜಿಲ್ಲೆ
ಮಹಾರಾಷ್ಟ್ರ
ಆಳಂದ
ಚಿಂಚೋಳಿ
ಗುಲಬರ್ಗಾ
ಅಫಜಲಪುರ
ಚಿತ್ತಾಪುರ
ಸೇಡಂ
ಆಂಧ್ರ ಪ್ರದೇಶ
ವಿಜಾಪುರ ಜಿಲ್ಲೆ
ಜೇವರ್ಗಿ
ಯಾದಗಿರಿ ಜಿಲ್ಲೆ



ಮಲ್ಲಾಬಾದ ಏತನೀರಾವರಿ ಪ್ರಾರಂಭಕ್ಕಾಗಿ ಮಲ್ಲಾಬಾದನಿಂದ ಜೇವರ್ಗಿಗೆ
ಪಾದಯಾತ್ರೆ ಹೊರಟಿರುವ ಸನ್ನಿವೇಶ



ರೈತರನ್ನು ಉದ್ದೇಶಿಸಿ ಮಾತನಾಡುತ್ತಿರುವ ಶ್ರೀ ಕೇದಾರಲಿಂಗಯ್ಯ ಹಿರೇಮಠರವರು




ತಾಲೂಕಿನ ಎಲ್ಲಾ ಮಠಧೀಶರು ಮಲ್ಲಾಬಾದ್ ಏತನೀರಾವರಿಗಾಗಿ
ಅಮರಣ ಉಪವಾಸ ಸತ್ಯಾಗ್ರಹಕ್ಕೆ ಕುಳಿತಿರುವ ಸಂದರ್ಭ



ಮಲ್ಲಾಬಾದ ಏತನೀರಾವರಿ ಯೋಜನೆ ಕಾಮಗಾರಿ ಭೂಮಿ ಪೂಜೆ ಮಾಡುತ್ತಿರುವ ಚಿತ್ರಣ



ಗುಲಬರ್ಗಾದಲ್ಲಿ ಕಬ್ಬಿನ ಬೆಳೆಗೆ ಬೆಂಕಿ ಹಚ್ಚುತ್ತಿರುವ ರೈತರು




ಗುಲಬರ್ಗಾದಲ್ಲಿ ತೊಗರಿ ಬೆಳೆಗಾರರ ಬೋರ್ಡ ರಚನೆಗಾಗಿ ನಡೆದ ರೈತರ ಸತ್ಯಾಗ್ರಹ ಚಳವಳಿ (18-12-1995)



ಗುಲಬರ್ಗಾದಲ್ಲಿ ವಿವಿಧ ಬೇಡಿಕೆಗಳನ್ನು ಈಡೇರಿಸುವಂತೆ ಆಗ್ರಹಿಸಿ ರೈತ ಸಂಘದಿಂದ ರಸ್ತೆ ರೋಕೋ ಚಳವಳಿ (1995)




ವಿವಿಧ ಬೇಡಿಕೆಗಳನ್ನು ಈಡೇರಿಸುವಂತೆ ಆಗ್ರಹಿಸಿ ಗುಲಬರ್ಗಾದಲ್ಲಿ ರೈತರು ಚಳವಳಿ ಮಾಡುತ್ತಿರುವ ಸನ್ನಿವೇಶ




ಕೃಷಿಗೆ 12 ಗಂಟೆಗಳ ವಿದ್ಯುತ್‌ಗಾಗಿ ಮತ್ತು ತೊಗರಿ ಬೋರ್ಡ ರಚನೆಗಾಗಿ
ನಡೆದ ಸಮಾವೇಶದ ಚಿತ್ರಣ (ಗುಲಬರ್ಗಾದಲ್ಲಿ)



ರೈತರ ಸಮಸ್ಯೆಗಳನ್ನು ಪರಿಹರಿಸುವಂತೆ ಆಗ್ರಹಿಸಿ ನಡೆದ ಚಳವಳಿಯಲ್ಲಿ ಭಾಗವಹಿಸಿದ ರೈತ
ಮಹಿಳೆಯರು (ಗುಲಬರ್ಗಾ 12–4–2007)




ತೊಗರಿ ಬೆಳೆಗೆ ಬೆಂಬಲ ಬೆಲೆ ನೀಡುವಂತೆ ಆಗ್ರಹಿಸಿ ನಡೆದ ತೊಗರಿ ಬೆಳೆಗಾರರ ಹೋರಾಟ ಸನ್ನಿವೇಶ (ಕೆರಾ ಬೊಸಗಾ ಕ್ರಾಸ್ 20.1.2001)



ರೈತರ ಹೋರಾಟದಲ್ಲಿ ಭಾಗವಹಿಸಿದ ಗೌರಮ್ಮ
.ಪಿ.ಪಾಟೀಲ್ ಮತ್ತು .ಕೆ.ನೀಲಾರವರು (14–6–2002)




ರೈತರು ಮತ್ತು ಕೃಷಿ ಕೂಲಿಕಾರರ ಬೇಡಿಕೆಗಳನ್ನು ಈಡೇರಿಸುವಂತೆ ಆಗ್ರಹಿಸಿ ನಡೆಸಿದ ರಸ್ತೆತಡೆ ಚಳುವಳಿಯಲ್ಲಿ ಮಹಿಳೆಯರು ಮತ್ತು ಪುರುಷರು (4–12–2007 ಫರಹತಾಬಾದ್)




ಭೂಸ್ವಾದೀನ ಕಾಯ್ದೆ ತಿದ್ದುಪಡೆ ವಿರೋಧಿಸಿ ನಡೆಸಿದ ಧರಣಿ ಸತ್ಯಾಗ್ರಹದಲ್ಲಿ ಭಾಗವಹಿಸಿ ಮಾತನಾಡುತ್ತಿರುವಮಾರುತಿ ಮಾನ್ಪಡೆಯವರು (ಗುಲಬರ್ಗಾ–30–6–2009)



ಬೆಳೆನಷ್ಟ ಮತ್ತು ಬ್ಯಾಂಕ್ ಸಾಲದಿಂದಾಗಿ ನೊಂದ ಆತ್ಮಹತ್ಯೆ ಮಾಡಿಕೊಂಡಿರುವ ಅಂಕಲಿಗಿ ಗ್ರಾಮದ ಶಿವಲಿಂಗಪ್ಪ ತಂದೆ ಕೊಂಬಣ್ಣ (40) ನ ನೇಣು ಹಾಕಿಕೊಂಡಿರುವ ಚಿತ್ರಣ



ರೈತರ ಹೋರಾಟದಲ್ಲಿ ಮಹಿಳೆಯರು ಭಾಗವಹಿಸಿದ ಚಿತ್ರಣ



ಮೀಟರ್ ಅಳವಡಿಸದಂತೆ ಆಗ್ರಹಿಸಿ ನಡೆಸಿದ  ವಿದ್ಯುತ ಚಳವಳಿ ಸಂದರ್ಭದಲ್ಲಿ
ತಹಶೀಲ್ದಾರರಿಗೆ ಮನವಿ ಸಲ್ಲಿಸುತ್ತಿರು ರೈತರು (೧-೧೦-೨೦೦೪, ಜೇವರ್ಗಿ)



ವಿವಿಧ ಬೇಡಿಕೆಗಳನ್ನು  ಆಗ್ರಹಿಸಿ ನಡೆದ ಪ್ರತಿಭಟನಾ ಮೆರವಣಿಗೆ ಎತ್ತಿನ ಬಂಡಿಗಳೊಂದಿಗೆ ರೈತರು
ಮತ್ತು ಕಾರ್ಯಕರ್ತರು   ಭಾಗವಹಿಸಿರುವ ಚಿತ್ರಣ (೭-೧-೨೦೦೪, ಜೇವರ್ಗಿ)




ರೈತ ಹೋರಾಟ ಸಮಿತಿಯಿಂದ ಗುಲಬರ್ಗಾದಲ್ಲಿ ಬೆಳೆ ವಿಮೆ ಬಿಡುಗಡೆಗೆ ಒತ್ತಾಯಿಸಿ ಧರಣಿ,
ದಿನಾಂಕ ೩೧–೧–೨೦೦೮



ಪ್ರತಿಭಟನೆಯಲ್ಲಿ ಪಾಲ್ಗೊಂಡ ಸಾವಿರಾರು ರೈತರು–ಕಾರ್ಯಕರ್ತರನ್ನು ಉದ್ದೇಶಿಸಿ ಪಕ್ಷದ ಮುಖಂಡ
ಕೇದಾರಲಿಂಗಯ್ಯ ಹಿರೇಮಠ ಅವರು ಮಾತನಾಡುತ್ತಿರುವುದು,